# ಶ್ರೀ ಸಂತ ಶುಭರಾಯರ ಜೀವನ ಮತ್ತು ಕಲಾಕೃತಿಗಳು

ಎಂ. ಫಿಲ್ ಪದವಿಗೆ ಸಾದರಪಡಿಸಿದ ಕಿರು ಮಹಾಪ್ರಬಂಧ

ಸಂಶೋಧಕಿ
ಶ್ರೀಮತಿ ಶೈಲಾ ಬಿರಡೋಲ



ಮಾರ್ಗದರ್ಶಕರು
ಡಾ|| ಎಸ್. ಸಿ. ಪಾಟೀಲ
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು

೨೦೦೭



ಲಲಿತ ಕಲಾನಿಕಾಯ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ





# ಸಂತ ಶುಭರಾಯರ ಜೀವನ ಮತ್ತು ಕಲಾಕೃತಿಗಳು

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಕಿರು ಸಂಶೋಧನ ಪ್ರಬಂಧ


ಸಂಶೋಧಕಿ
**ಶ್ರೀಮತಿ ಶೈಲಾ ಎಸ್.ಬಡೋರ್ಲೇಲ**

ಮಾರ್ಗದರ್ಶಕರು
**ಡಾ. ಎಸ್.ಸಿ.ಪಾಟೀಲ**
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು

**ಲಲಿತಕಲಾ ನಿಕಾಯ**
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬


೨೦೦೨









**ಡಾ.ಎಸ್.ಸಿ.ಪಾಟೀಲ**
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-583276

# ದೃಢೀಕರಣ ಪತ್ರ

ಶ್ರೀಮತಿ ಶೈಲಾ.ಎಸ್.ಬಡೋರ್ಲ ಇವರು ಬರೆದು ಸಾದರಪಡಿಸಿದ **ಸಂತ ಶುಭರಾಯರ ಜೀವನ ಮತ್ತು ಕಲಾಕೃತಿಗಳು** ಎಂಬ ಶೀರ್ಷಿಕೆಯ ಕಿರು ಸಂಶೋಧನ ಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು, ಅವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಪ್ರಬಂಧ ಇಡಿಯಾಗಿ, ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

(ಡಾ.ಎಸ್.ಸಿ.ಪಾಟೀಲ)

ದಿನಾಂಕ : ೧೪/೦೯/೨೦೦೭
ಸ್ಥಳ : ವಿದ್ಯಾರಣ್ಯ



## ಪ್ರಮಾಣ ಪತ್ರ

**"ಸಂತ ಶುಭರಾಯರ ಜೀವನ ಮತ್ತು ಕಲಾಕೃತಿಗಳು"** ಎಂಬ ಶೀರ್ಷಿಕೆಯ ಕಿರು ಸಂಶೋಧನ ಪ್ರಬಂಧವನ್ನು ಡಾ.ಎಸ್.ಸಿ.ಪಾಟೀಲ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು ದೃಶ್ಯಕಲಾ ವಿಭಾಗ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Baradol

(ಶ್ರೀಮತಿ ಶೈಲಾ.ಎಸ್.ಬಡೋಲ.)
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-583276

ದಿನಾಂಕ : ೧೪/೦೯/೨೦೦೨
ಸ್ಥಳ : ವಿದ್ಯಾರಣ್ಯ

## ಚಿತ್ರಋಣ ನೆರವು

ಪ್ರಸ್ತುತ ಅಧ್ಯಯನಕ್ಕೆ ಎಲ್ಲಾ ರೀತಿಯಿಂದಲೂ ನೆರವಾಗಿ ಪ್ರತಿಹಂತದಲ್ಲೂ ತಿದ್ದಿ ತೀಡಿ ಮಾರ್ಗದರ್ಶನ ನೀಡಿ ಪ್ರೋತ್ಸಾಹಿಸಿದ ದೃಶ್ಯಕಲಾವಿಭಾಗದ ಮುಖ್ಯಸ್ಥರಾದ ಪ್ರೊ. ಎಸ್.ಸಿ. ಪಾಟೀಲ್ ಸರ್ ಅವರಿಗೆ ಮೊದಲ ಕೃತಜ್ಞತೆಗಳು.

ಕ್ಷೇತ್ರಕಾರ್ಯದಲ್ಲಿ ತುಂಬಾ ಸಹಕಾರ ನೀಡಿ ನನಗೆ ಶುಭರಾಯರ ಛಾಯಾ ಚಿತ್ರ ಮತ್ತು ವಿಡಿಯೋ ಚಿತ್ರಕರಣ ಮಾಡಿಕೊಳ್ಳಲು ಅನುಕೂಲತೆ ಮಾಡಿಕೊಟ್ಟ ಶ್ರೀ ಋತುರಾಜ ಪುರಷೋತ್ತಮ ಬುವಾ ಮತ್ತು ಶುಭಾಂಶಿ ಬುವಾ (ಸೊಲ್ಲಾಪುರ) ಅವರ ನೆರವು ಮರೆಯಲು ಸಾಧ್ಯವಿಲ್ಲ. ಹಿರಿಯ ಕಲಾವಿದ ಎನ್.ಸಿ. ದೇಸಾಯಿ ಅವರ ಕುಟುಂಬದವರು ಶುಭರಾಯರ ಬಗ್ಗೆ ಬರೆದ ಲೇಖನ. ಛಾಯಾಚಿತ್ರಣಗಳನ್ನು ನೀಡಿ ಸಹಕರಿಸಿದ್ದಾರೆ.

ಮಹಾರಾಷ್ಟ್ರ ಸರ್ಕಾರದವರು ಶುಭರಾಯರ ಕುರಿತು ತಂದ ವರ್ಣಚಿತ್ರಗಳ ಕ್ಯಾಟಲಾಗ್‌ನ್ನು ಅತ್ಯಂತ ಕೃತಜ್ಞತೆಯಿಂದ ಪ್ರಸ್ತುತ ಅಧ್ಯಯನಕ್ಕೆ ಶುಭರಾಯರ ಚಿತ್ರಗಳ ನೆರವನ್ನು ಪಡೆದಿದ್ದೇನೆ. ಲಲಿತಕಲಾ ಅಕಾಡೆಮಿ ಹೊರತಂದ ಕಿರು ಪುಸ್ತಕ ಸಂತ ಶುಭರಾಯರ ಬಗೆಗಿರುವ ಮಹತ್ವದ ಆಕರ ಗ್ರಂಥ ಅದರ ನೆರವು ಗ್ರಂಥದುದ್ದಕ್ಕೂ ಇದೆ ಎಂದು ವಿನಮ್ರವಾಗಿ ಸ್ಮರಿಸಿಕೊಳ್ಳುತ್ತೇನೆ.

ಈ ಅಧ್ಯಯನ ಮಾಡಲು ಸಹಕಾರ ನೀಡಿ ನನಗಿಂತಲೂ ಹೆಚ್ಚು ತೊಂದರೆ ತೆಗೆದುಕೊಂಡ ನನ್ನ ಪೂಜ್ಯ ಪತಿ ಶ್ರೀ ರವೀಂದ್ರ ಕಮಾರ ಎಂ. ಮನಗೊಳಿ ಮತ್ತು ಎಲ್ಲಾ ಕುಟುಂಬದವರ ಸಹಕಾರವನ್ನು ಸ್ಮರಿಸುತ್ತೇನೆ. ವಿದ್ಯಾಭ್ಯಾಸದುದ್ದಕ್ಕೂ ಪ್ರೋತ್ಸಹಿಸುತ್ತಾ ಬಂದ ತಂದೆ ಶ್ರೀ ಎಸ್.ಆರ್. ಬರಡೋಲಾ ತಾಯಿ ಜಗದೇವಿ ಎಸ್. ಬರಡೋಲಾ ಹಾಗಿಯೇ ಮಂದಾಕಿನಿ ಶ್ರೀ ಮಣ್ಣೂರಿ ಬಸವರಾಜ ಬ. ಮಣೂರಿ ಅವರ ಪ್ರೀತಿ ವಿಶ್ವಾಸಕ್ಕೆ ಋಣಿಯಾಗಿದ್ದೇನೆ.

ಕನ್ನಡ ವಿ.ವಿ. ಬಾದಾಮಿ ಕೇಂದ್ರದ ಎಲ್ಲಾ ಅಧ್ಯಾಪಕ, ಸಿಬ್ಬಂಧಿವರ್ಗ , ಕನ್ನಡ ವಿ.ವಿ. ದೃಶ್ಯಕಲಾ ವಿಭಾಗದ ಎಲ್ಲಾ ಅಧ್ಯಾಪಕ ವರ್ಗದವರಿಗೆ ಹಾಗೆಯೇ ಕ.ವಿ.ವಿ.ಯ ಗ್ರಂಥಾಲಯಕ್ಕೆ ಋಣಿಯಾಗಿದ್ದೇನೆ. ನನ್ನ ಅನಾರೋಗ್ಯದ ಸಂದರ್ಭದಲ್ಲಿ ಡಿ.ಟಿ.ಪಿ ಪ್ರೂಪ್ ತಿದ್ದುವಲ್ಲಿ ನೆರವಾದ ಸಂಶೋಧನಾ ಸಹಪಾಠಿಗಳಾದ ಶಶಿಕಾಂತ ಬಸರೀಕಟ್ಟಿ . ಮುತ್ತಮ್ಮ, ಕಿಶೋರ್ ದಾಟನಾಳ, ಎನ್.ಎಂ. ಅಂಗಡಿ ಮುಂತಾದವರಿಗೆಲ್ಲಾ ಕೃತಜ್ಞತೆಗಳು.

— ಶ್ರೀಮತಿ ಶೈಲಾ ಬರಡೋಲ

# ಸಂತ ಶುಭರಾಯರ ಜೀವನ ಮತ್ತು ಚಿತ್ರಕಲಾಕೃತಿಗಳು.

## ಪರಿವಿಡಿ



ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ವೈದಾನಿಕತೆ.

**ಮಾ**ನವನ ಸಾಂಸ್ಕೃತಿಕ ಬೆಳವಣಿಗೆಯ ಇತಿಹಾಸದಲ್ಲಿ ಕಲಾ ಸೃಷ್ಟಿಯ ಒಂದು ಮಹತ್ವದ ಹಂತ. ಕಲೆಯ ನಾಗರಿಕತೆಯ ಮೆಟ್ಟಲನ್ನೇರುವುದಕ್ಕಿಂತ ಪೂರ್ವದಲ್ಲಿಯೇ ಆದಿವಾಸಿ ಮಾನವ ನಿಸರ್ಗದ ಮಡಿಲಲ್ಲಿ ವಾಸಿಸುವ ಸಂದರ್ಭದಲ್ಲಿ ತನ್ನ ಮನಸ್ಸಿನ ಭಾವನೆಗಳನ್ನು ಅಭಿವ್ಯಕ್ತಗೊಳಿಸಲು ಚಿತ್ರರಚನೆಯ ಮಾಧ್ಯಮಕ್ಕೆ ಕಾಲಿಟ್ಟಿರಬೇಕು. ಶೃತಿಪಾತಳಿಯಲ್ಲಿದ್ದ ಸೃಜನಶೀಲಮನಸ್ಸು ಸಾಂಸ್ಕೃತಿಕ ಜ್ಞಾನಸಂಪತ್ತು ಕ್ರಮೇಣ ದೃಶ್ಯಮಾಧ್ಯಮದಲ್ಲಿ ಅಭಿವ್ಯಕ್ತಿ ಪಡೆಯಿತು. ವ್ಯಕ್ತಿ ತನ್ನ ಮತ್ತು ಸಮೂಹದ ಜೀವನದಲ್ಲಿ ಸೌಂದರ್ಯದ ಭಾವನೆಗಳನ್ನ ಧಾರ್ಮಿಕ ವಿಧಿಕ್ರಿಯೆಯ ಹಿನ್ನೆಲೆಯಲ್ಲಿ ಮನರಂಜನೆಯ ಸಾಧನವಾಗಿ, ವೃತ್ತಿಯ ಒಂದು ಭಾಗವಾಗಿ, ಹೀಗೆ ಹತ್ತು ಹಲವು ರೀತಿಯಲ್ಲಿ ಹೊರಹಾಕುತ್ತ ಬಂದಿದ್ದಾನೆ. ಈ ಸೃಜನಾತ್ಮಕವಾದ ಪುರಾತನ ಕಲಾಸೃಷ್ಠಿ ವ್ಯಕ್ತಿಯಿಂದ ವ್ಯಕ್ತಿಗೆ ಪರಿಸರದಿಂದ ಪರಿಸರಕ್ಕೆ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುವುದು ಸಹಜವಾದ ಅಂಶ ವ್ಯಕ್ತಿ ಹಲವಾರು ರೀತಿಯ ಪ್ರಭಾವ ಪ್ರೇರಣೆಗಳಿಗೆ ಒಳಗಾಗಿ, ಹೀಗೆ ತನ್ನ ಸ್ವರೂಪದಲ್ಲಿ ಆಗಾಗ ಬದಲಾವಣೆ ಮಾಡುತ್ತ ಬಂದರೂ ಸಹ ಆಯಾ ಪ್ರದೇಶದ ಕಲೆಗಳು ಆಯಾಜನರ ವಿಭಿನ್ನ ಮನೋಭಾವದ ಸುಂದರ ಅಭಿವ್ಯಕ್ತಿಯ ಪ್ರತೀಕಗಳಾಗಿ ನಡೆದುಬಂದಿವೆ.[1] ಎಂಬ ಮಾತು ಗಮನಾರ್ಹವಾಗಿದೆ. ಯಾವುದೇ ದೇಶದ ಅಥವಾ ನಾಡಿನ ಕಲೆಗಳು ಒಮ್ಮೆಲೆ ಪರಿಪೂರ್ಣತೆಯ ಹಂತವನ್ನು ಏರುವುದಿಲ್ಲ. ಅವು ಪರಿಪಕ್ವತೆಯ ಸ್ಥಿತಿಯನ್ನು ಮುಟ್ಟುವುದಕ್ಕೆ ಶತಶತಮಾನಗಳುದ್ದಕ್ಕೂ ಸಾವಿರಾರು ಕಲಾವಿದರು, ಪ್ರತಿಭಾವಂತರು ಅವಿರತವಾಗಿ ಮಾಡಿದ ಪ್ರಯತ್ನ ಇರುತ್ತದೆ. ಹಾಗೆಯೇ ನಾಡಿನ ಪ್ರಜೆಗಳ ಹಾಗೂ ಅವರ ಪ್ರತಿನಿಧಿಗಳ ಅರಸರ, ಮಾಂಡಲಿಕರ ನಾಯಕರ ಕಲಾಭಿರುಚಿಯ, ಕಲಾಭಿಜ್ಞತೆಯ ಆಶ್ರಯ ಪಾಲಿಸಿ ಪೋಷಣೆ ಮತ್ತು ಪ್ರೋತ್ಸಾಹಗಳು ಇರುತ್ತವೆ. ಸಾಹಿತ್ಯ ಸಂಗೀತ, ಚಿತ್ರ, ಶಿಲ್ಪ, ನೃತ್ಯ, ಕಲೆ ಮೊದಲಾದ ಲಲಿತಕಲೆಗಳು ಹಿಂದಿನ ಒಟ್ಟು ಜನಾಂಗದ ಪ್ರತಿಬಿಂಬವಾಗಿ ಬೆಳವಣಿಗೆ ಹೊಂದಿರುತ್ತವೆ. ಅಲ್ಲದೆ ಆಯಾಕಾಲದ

೧. ಡಾ.ಎಸ್.ಸಿ. ಪಾಟೀಲ್ : ಹಚ್ಚೆಚಿತ್ರಕಲೆ. ಪುಟ-೩

ಸಾಂಸ್ಕೃತಿಕ ಇತಿಹಾಸವನ್ನೇ ತಮ್ಮಲ್ಲಿ ಒಡಮೂಡಿಸಿಕೊಂಡಿರುತ್ತವೆ. ಈ ಹಿನ್ನೆಲೆಯಲ್ಲಿ ಕನ್ನಡನಾಡು ಆರಂಭಕಾಲದಿಂದಲೂ ಕಲಾ ಕ್ಷೇತ್ರದಲ್ಲಿ ಸಾಧಿಸಿದ ಸಿದ್ಧಿಯು ಅನುಪಮವಾದುದ್ದು ಕನ್ನಡ ನಾಡಿನ ಕಲೆಗಳ ಹಿರಿಮೆ ಅದರ ವೈವಿಧ್ಯತೆಯಲ್ಲಿದೆ. ನೈಪುಣ್ಯದಲ್ಲಿದೆ; ಮತ್ತು ಪ್ರಾವಿಣ್ಯತೆಯಲ್ಲಿದೆ. ಹೀಗಾಗಿ ಅದು ಭಾರತೀಯ ಕಲಾಕ್ಷೇತ್ರದಲ್ಲಿಯೇ ಅತ್ಯುನ್ನತ ಮಟ್ಟವನ್ನು ಅದು ಪಡೆದುಕೊಂಡಿದೆ.

ಕರ್ನಾಟಕ ಸಂಸ್ಕೃತಿಯನ್ನು ಅಧ್ಯಯನ ಮಾಡುವಲ್ಲಿ ಮಾನವನ ಪ್ರಾಚೀನತೆಯ ಇತಿಹಾಸವನ್ನು ನೋಡಿದಾಗ ಪ್ರಕೃತಿಯ ಅನೇಕ ಜೀವಗಳಲ್ಲಿ ಮಾನವನ ಜೀವನವೂ ಒಂದು. ನಿಸರ್ಗದೊಡನೆ ನಿಸರ್ಗವಾಗಿ ಮನುಷ್ಯ ಬದುಕತೊಡಗಿದಾಗ ಉಂಟಾದ ಆಯಾಸ, ಭಯ, ಆನಂದ, ಉತ್ಸಾಹದ ಪ್ರತೀಕವಾಗಿ ನೂರಾರು ಚಟುವಟಿಕೆಗಳು ಕಾಲಕ್ರಮೇಣ ಕಾಣಿಸಿಕೊಂಡವು. ಆ ಒಟ್ಟು ಚಟುವಟಿಕೆಗಳನ್ನು ಕಲೆ ಎಂಬ ಪದದ ವ್ಯಾಪ್ತಿಯಲ್ಲಿ ವಿದ್ವಾಂಸರು ಗಮನಿಸುತ್ತಾರೆ. ಸಮಾಜಶಾಸ್ತ್ರಜ್ಞರು ಕಲೆಯ ಉಗಮವನ್ನು ಮಾನವನ ಸಾಮಾಜಿಕ ಜೀವನದ ವಿಕಾಸದಲ್ಲಿ ಕಾಣುತ್ತಾರೆ. ಮನಃಶಾಸ್ತ್ರಜ್ಞರು ಕಲೆಯ ಉಗಮವನ್ನು ಮಾನವನ ಮನಸ್ಸಿನಲ್ಲಿ ಕಂಡುಹಿಡಿಯುತ್ತಾನೆ. ಮನಸ್ಸಿನ ಸೂಕ್ಷ್ಮ ಚಲನವಲನಗಳ ಅಭಿವ್ಯಕ್ತಿಯೇ ಕಲೆಯೆಂದು ಅದನ್ನು ಅಳೆಯತೊಡಗುತ್ತಾನೆ. ಒಂದು ಮನಸ್ಸಿನಲ್ಲಿ ಅದು ಉಗಮಿಸಿ, ಇನ್ನೊಂದು ಮನಸ್ಸನ್ನು ಅದು ತುಂಬುವುದು. ಈ ಅಭಿಪ್ರಾಯ ಮನುಕುಲದ ವಿವಿಧ ರಂಗದ ಇತಿಹಾಸದ ಇಂದಿನ ಸ್ಥಿತಿಯಲ್ಲಿ ನಿಂತು ನೋಡಿದಾಗ ಮನುಷ್ಯ ಜನ್ಮದ ರಹಸ್ಯದಷ್ಟು ಕಲೆಯ ಹುಟ್ಟಿನ ರಹಸ್ಯವನ್ನು ಊಹಿಸಬಹುದು.

**ಅಧ್ಯಯನದ ಉದ್ದೇಶ**

ಯಾವುದೇ ಒಂದು ಕಲಾ ಪರಂಪರೆಯ ಬೆಳವಣಿಗೆಯ ಹಿಂದೆ ಆ ಸಂಸ್ಕೃತಿಯ ತಾಯಿ ಬೇರುಗಳಿರುವುದನ್ನು ಪ್ರಮುಖವಾಗಿ ಗುರುತಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ ನಮ್ಮ ದೇಶದ ಅಥವಾ ಕರ್ನಾಟಕದ ಸಾಂಸ್ಕೃತಿಕ ಪರಂಪರೆಯ ಇತಿಹಾಸವನ್ನು ಗಮನಿಸಿದಾಗ ಚಿತ್ರ, ಶಿಲ್ಪ, ಸಂಗೀತ, ನೃತ್ಯ, ನಾಟಕ, ಮುಂತಾದ ಕಲೆಗಳು ನೀಡಿದ ಕೊಡುಗೆಗಳು ಅನನ್ಯವಾದವುಗಳು. ಹಾಗೇಯ ಈ ಕಲಾ ಪರಂಪರೆಯ ಹಿಂದೆ ದುಡಿದ ಕಲಾವಿದರ ಸೇವೆ, ಕಲಾಕೃತಿಯನ್ನು ನಿರ್ಮಿಸಿದ ಕಲಾವಿದರ ಕೊಡುಗೆಯೂ ಬಹುಮುಖ್ಯವಾದುದಾಗಿರುತ್ತದೆ.

ಮಾನವನ ಆಂತರಿಕ ಬದುಕಿಗೆ ಸಂಬಂಧಿಸಿದ್ದು ಸಂಸ್ಕೃತಿ. ಆತನ ಪರಿಣಿತ ಫಲವೇ ಸಂಸ್ಕೃತಿ ಎಂತಲೂ ಹೇಳುತ್ತಾರೆ. ಸಂಸ್ಕೃತಿಯ ಭಾಗವೆ ಆಗಿರುವ ಕಲೆ ಕಲಾವಿದನ ಪ್ರತಿಭೆಯ ಪ್ರತಿನಿಧಿ ಮಾತ್ರವಲ್ಲದೆ ಜನಸಮೂದಾಯದ ಪ್ರತಿಬಿಂಬವೂ ಹೌದು. ಕಲಾವಿದ ರಚಿಸಿದ ಕಲಾಕೃತಿಗಳಲ್ಲಿ ಜನ ಜೀವನದ ಪ್ರತಿಬಿಂಬವನ್ನು ಒಂದು ಸಮೂದಾಯದ ಜನಜೀವನ ಮತ್ತು ಸಂಸ್ಕೃತಿಯನ್ನು ದಾಖಲಿಸುವಲ್ಲಿ ಕಲಾಕೃತಿಗಳ ಪಾತ್ರ ಬಹು ಮುಖ್ಯವಾಗಿದೆ. ಒಂದು ನಾಡಿನ ಹಿರಿಮೆಯನ್ನು ಸಾರುವಲ್ಲಿ ಅಲ್ಲಿನ ಸಾಹಿತ್ಯ ಮತ್ತು ಕಲಾ ಪ್ರಕಾರಗಳು ಪ್ರಮುಖ ಪಾತ್ರವಹಿಸುತ್ತವೆ. ವ್ಯಕ್ತಿಯೊಬ್ಬನ ತನ್ನ ನಾಡಿನಲ್ಲಿ ಬಾಳಿ ಬದುಕಿ, ಅದರ ನೆಲದಲ್ಲಿ

---

೨. ಡಾ. ಬಿ.ಕೆ.ಹಿರೇಮಠ : ಸ್ಪಷ್ಟ. ಪು.೨೧

ನಡೆದು ನೀರಿನಲ್ಲಿ ಈಜಿ ಅಲ್ಲಿನ ಗಾಳಿಯನ್ನು ಉಸಿರಾಡಿ ಅಲ್ಲಿನ ಯಾವತ್ತೂ ಅನುಭವಗಳಿಂದ ತನ್ನ ಮನಸ್ಸನ್ನು ಬೆಳೆಯಿಸಿಕೊಂಡು ಪ್ರಬುದ್ಧನಾಗುತ್ತಾನೆ. ಆ ಆವರಣವು ಕಲಾವಿದನಲ್ಲಿ ಹುಟ್ಟಿಸಿದ ನೂರಾರು ಸಿಹಿ–ಕಹಿ ಅನುಭವಗಳೆಲ್ಲ ಒಂದೊಂದು ಕಲಾ ಸಾಧನೆಯ ಮೂಲಕ ಪ್ರಕಟವಾಗುತ್ತವೆ. ಅವನು ಜೀವನವನ್ನು ನೋಡುವ ನೋಟ, ಪರಿಭಾವಿಸುವ ನಡೆಯುವ ದಾರಿಗಳು ಇತರರಿಗಿಂತ ಭಿನ್ನವಾಗಿರುತ್ತವೆ. ಕಲಾವಿದ ಬೆಳೆದು ಬಂದಿರುವ ಪರಿಸರ, ದೇಶೀಯ, ಸಂಸ್ಕೃತಿಗಳು, ಅವನ ಕಲಾಕೃತಿ ರಚನೆಯ ಮೇಲೆ ದಟ್ಟ ಪ್ರಭಾವವನ್ನು ಬೀರುತ್ತವೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಕಲೆ, ಮತ್ತು ಕಲಾವಿದರ ಕುರಿತು ಅಧ್ಯಯನಗಳು ಪರೋಕ್ಷವಾಗಿ ಸಂಸ್ಕೃತಿ, ಸಮಾಜ, ಮತ್ತು ಸಮೂದಾಯಿಕ ಅಧ್ಯಯನಗಳೇ ಆಗಿರುತ್ತವೆ ಎಂದು ಹೇಳಬಹುದು.

ಕಲಾ ಪ್ರಪಂಚದಲ್ಲಿ ಭಾರತೀಯ ಚಿತ್ರಕಲೆಯ ಕೊಡುಗೆ ಅಪಾರವಾದದ್ದು. ಇಲ್ಲಿಯ ಕಲಾಕೃತಿಗಳ ವಸ್ತು ವೈವಿಧ್ಯ ಮತ್ತು ಶೈಲಿ ಇವುಗಳ ದೃಷ್ಟಿಯಿಂದ ನಮ್ಮ ಚಿತ್ರ ಕಲೆಯ ಅಭಿವ್ಯಕ್ತಿ ತನ್ನ ಆದರ್ಶವನ್ನು ಎಲ್ಲಾಕಾಲದಲ್ಲಿ  ಉಳಿಸಿಕೊಂಡು ಬಂದಿವೆ. ಇಂತಹ ಅನನ್ಯ ಸಾಂಸ್ಕೃತಿಕ ಪರಂಪರೆ ಹೊಂದಿದ ಕಲಾಕೃತಿಗಳು. ಇವುಗಳ ವಿಮರ್ಶೆ, ಕಲಾಇತಿಹಾಸ, ಮುಂತಾದ ಅಂಶಗಳು ಹಾಗೂ ಕಲಾವಿದರ ಕುರಿತು ಅಧ್ಯಯನಗಳು ಅಷ್ಟೊಂದು ಗಂಭೀರವಾಗಿ ನಮ್ಮ ದೇಶದಲ್ಲಿ ನಡೆದಿಲ್ಲ. ಕಲಾವಿದರು ಬಾಳಿ ಬದುಕಿದ ಪರಿಸರ ಮತ್ತು ಹಿನ್ನೆಲೆಯನ್ನು ಕುರಿತು ಯುರೋಪಿನ ಜನರು ಹೆಚ್ಚು ಆಸಕ್ತಿವಹಿಸಿದ್ದಾರೆ. ಸುಮಾರು ಕ್ರಿ.ಶ. ೧೪–೧೫ ನೇ ಶತಮಾನದಿಂದ ಲಿಖಿತ ವಿವರಗಳ ಮೂಲಕ ಕಲಾಕೃತಿಗಳ ಶೈಲಿ, ವರ್ಣಗಾರಿಕೆ ಮತ್ತು ಸಮಕಾಲೀನ ಸಂಸ್ಕೃತಿಯ ಪರಿಚಯವನ್ನು ಮಾಡಿಕೊಡುತ್ತಾ ಬಂದಿದ್ದಾರೆ. ಇಂತಹ ಪ್ರಯತ್ನಗಳು ನಮ್ಮಲ್ಲಿ ಇತ್ತೀಚಿಗೆ ಆರಂಭಗೊಂಡಿವೆ. ಕರ್ನಾಟಕದ ಸಂದರ್ಭದಲ್ಲಿ ಈ ಬಗೆಯ ಪ್ರಯತ್ನ ತೀರಾ ಇಲ್ಲವೆಂದೇ ಹೇಳಬಹುದು. ಈ ಕೊರತೆಯನ್ನು ತುಂಬಿಕೊಡುವ ಕಿರುಪ್ರಯತ್ನ ಈ ಅಧ್ಯಯನದ ಉದ್ದೇಶಗಳಲ್ಲೊಂದಾಗಿದೆ. ನಮ್ಮ ದೇಶದಲ್ಲಿ ಕಲೆ ಮತ್ತು ಕಲಾವಿದರನ್ನು ಕುರಿತು ಈಚಿಗೆ ಬರವಣಿಗೆಗಳು ಬರುತ್ತಿರುವುದನ್ನು ಕಾಣುತ್ತೇವೆ.

ಕರ್ನಾಟಕದಲ್ಲಿ ಈ ಕ್ಷೇತ್ರದ ಕುರಿತು ನಡೆದಿರುವ ಸಂಶೋಧನೆಗಳು ಬೆರಳೆಣಿಕೆಯಷ್ಟು ಮಾತ್ರವಾಗಿದೆ. ಇದರ ಜೊತೆಯಲ್ಲಿರುವ ಸಂಗೀತ, ವಾಸ್ತು ಶಿಲ್ಪ, ಸಾಹಿತ್ಯದಲ್ಲಿ ಸಾಕಷ್ಟು ರೀತಿಯ ಸಂಶೋಧನೆಗಳು ನಡೆದಿವೆ. ಆದರೆ ಚಿತ್ರ ಕಲೆಯ ಕ್ಷೇತ್ರದಲ್ಲಿ ಕಲೆಯ ಕುರಿತು ಕಲಾವಿದರ ಕುರಿತು ಇಲ್ಲಿಯವರೆಗೆ ಅಷ್ಟೊಂದು ಗಂಭೀರವಾದ ಅಧ್ಯಯನಗಳು ನಡೆಯದೇ ಇರುವುದನ್ನು ಗಮನಿಸಿ ಈ ದಿಶೆಯಲ್ಲಿ ಚಿತ್ರ ಕಲಾವಿದರಾದ ಸಂತ ಶುಭರಾಯರ ಜೀವನ ಮತ್ತು ಕಲಾಕೃತಿಗಳು ಈ ವಿಷಯದ ಕುರಿತು ಅಧ್ಯಯನವನ್ನು ಮಾಡುವ ಉದ್ದೇಶ ಹೊಂದಲಾಗಿದೆ.

ಮಾನವನ ಪ್ರಾಚೀನತೆಯನ್ನು ಆದಿಮಾನವನ ಹಂತದ್ದೆಂದು ಗಮನಿಸಿದಾಗ ಅವನ ಬದುಕಿನ ಉಹಾಚಿತ್ರವನ್ನು ಕಲ್ಪಿಸಿದಾಗ ಅವನ ಭಯ, ಆತಂಕ, ರೋಗರುಜಿನು, ಭೂಕಂಪನ ಪ್ರವಾಹಗಳಿಗೆ ಅವನು ತೋರುತ್ತಿದ್ದ ಪ್ರತಿಕ್ರಿಯೆ. ಹೇಗಿರಬಹುದಿತ್ತು? ಬುದ್ಧಿ ಬೆಳೆದ ನಂತರ ಅವನ ಪ್ರತಿಕ್ರಿಯೆ ದೇವ ದೈವದೊಡನೆ, ಆಚಾರ ವಿಚಾರದೊಡನೆ  ಹೇಗಿರಬಹುದಿತ್ತು ಇಂತಹ ಪ್ರಶ್ನೆ ಹಾಕಿಕೊಂಡಾಗ ತನ್ನ ಸಮಾಧಾನಕ್ಕಾಗಿ ದುಃಖದ ಪ್ರತೀಕಾರಕ್ಕಾಗಿ ಹುಟ್ಟಿಸಿಕೊಂಡ ಚಟುವಟಿಕೆಗಳೇ ಚಿತ್ರಕಲೆಗಳಾದವು.

ಭಾರತೀಯ ಪರಂಪರೆ ಹಾಗೂ ಪಾಶ್ಚಾತ್ಯ ತಂತ್ರಗಳ ಅತ್ಯುತ್ತಮ ಸಮನ್ವಯವನ್ನು ಚಿತ್ರಕೃತಿಗಳಲ್ಲಿ

ಸಾಧಿಸಿದ ಕಲಾವಿದರು ನಮ್ಮಲ್ಲಿ ಆಗಿಹೋಗಿದ್ದಾರೆ. ಪೌರಾಣಿಕ ಹಾಗೂ ಐತಿಹಾಸಿಕ ಚಿತ್ರಗಳಲ್ಲಿ ಅನನ್ಯ ಕಲಾಸಿದ್ಧಿ ಪಡೆದ ಸಂಪ್ರದಾಯ ನಿಷ್ಠ ಕಲಾವಿದರಿಗೆ ಸ್ಫೂರ್ತಿಯಾಗಿ ಕಲಾವಿದ ಚಿತ್ರಕಲೆಯಿಂದ ಹೇಗೆ ಜೀವಿಸಬಹುದು ಎಂಬುದನ್ನು ತೋರಿಸಿದ ಸಂಬಧ ಬಾಳನ್ನು ಕಂಡ ಹಿರಿಯ ಕಲಾವಿದರಿದ್ದಾರೆ. ಹಾಗೆಯೇ ರಾಜಾಶ್ರಯದಲ್ಲಿ ದುಡಿದ ಅತ್ಯುತ್ತಮ ಕಲಾವಿದರು, ಅಲಂಕಾರ ಕಲೆ ಸೂಕ್ಷ್ಮಕಲೆಗಳಲ್ಲಿ ಖ್ಯಾತವೆತ್ತ ಮತ್ತು ನವ್ಯಕಲಾ ತಂತ್ರದಲ್ಲಿ ಪ್ರಯೋಗ ನಡೆಸಿದ ಹಾಗೂ ನಡೆಸುತ್ತಿರುವ ಈ ಕಲಾವಿದರ ಅಮೂಲ್ಯ ರಚನೆಗಳು ನಮ್ಮ ನಾಡಿಗೆ ಕೀರ್ತಿಯನ್ನು ಗಳಿಸಿಕೊಟ್ಟಿರುವುದಲ್ಲದೆ, ಚಿತ್ರಕಲಾಕ್ಷೇತ್ರದಲ್ಲಿ ಇವರ ಸಾಧನೆಗಳು ಶಾಶ್ವತವಾಗಿ ನಿಂತಿರುವುದು. ಹೆಮ್ಮೆಯ ಸಂಗತಿಯಾಗಿದೆ. ಇಂತಹ ಹಲವಾರು ವಿಚಾರಗಳ ಹಿನ್ನೆಲೆಯಲ್ಲಿ ಸಂತ ಶುಭರಾಯರು ಒಬ್ಬರು ಹಲವಾರು ವಿಷಯಗಳನ್ನು ಮುಂದಿಟ್ಟುಕೊಂಡು ಚಿತ್ರರಚಿಸಿದ ಕಲಾವಿದರಾಗಿದ್ದಾರೆ. ಇವರ ಕಲಾಕೃತಿಗಳು ಹೆಚ್ಚಾಗಿ ವಿಷ್ಣುವಿನ ದಶಾವತಾರ, ಕೃಷ್ಣನ ಲೀಲೆಗಳು, ಪೌರಾಣಿಕ ಪ್ರಸಂಗಗಳು ರಾಮಾಯಣ, ಮಹಾಭಾರತ ಇನ್ನು ಮುಂತಾದ ಕಲಾಕೃತಿಗಳು ರಚನೆಯಾಗಿವೆ.

ಸಂತ ಶುಭರಾಯರು ಒಬ್ಬ ಕಲಾವಿದರೆಂದು ಇಂದಿನ ಯುವ ಜನರಿಗೆ ಗೊತ್ತಿರಲಾರದು ಇವರು ಚಿತ್ರಕಾರ ಮಾತ್ರವಲ್ಲದೆ ಅವರೊಬ್ಬ ಕವಿ, ಸಂಗೀತಗಾರ, ನೃತ್ಯಗಾರ, ಸಮಾಜ ಸುಧಾರಕ, ಸಂತ ಹಾಗೂ ಒಬ್ಬಯೋಗಿ ಕೂಡಾ ಆಗಿದ್ದರು. ಈ ಅಜ್ಞಾತ ಕಲಾವಿದನ ಕುರಿತು ಸಮಾಜಕ್ಕೆ ಪರಿಚಯಿಸುವ ಪ್ರಯತ್ನದೊಂದಿಗೆ ಅವನ ಕಲಾಕೃತಿಗಳಲ್ಲಿಯ ಮುಖ್ಯ ಉದ್ದೇಶಗಳು ಹೆಚ್ಚಾಗಿ ಪೌರಾಣಿಕ ಹಿನ್ನಲೆಯಲ್ಲಿ ರಚನೆಗೊಂಡಿವೆ. ಅಲ್ಲದೆ ಈ ಕಲಾವಿದ ಸಮಾಜ ಸುಧಾರಕ ಸಂಗೀತಗಾರರಾಗಿ ರೂಪಗೊಂಡಿರುವುದಲ್ಲದೆ. ಕರ್ನಾಟಕದಲ್ಲಿ ಹುಟ್ಟಿ ಒಬ್ಬ ಉತ್ತಮ ಕಲಾವಿದನಾಗಿ ಸೋಲ್ಲಾಪುರದಲ್ಲಿ ಬೆಳೆದಿರುವುದು ಹೆಮ್ಮೆಯ ವಿಷಯವಾಗಿದೆ. ಇಂತಹ ಮಹಾನ್ ಪ್ರಸಿದ್ಧ ಕಲಾವಿದನ ಕುರಿತು ಇಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ.

**ಇದುವರೆಗೆ ನಡೆದ ಅಧ್ಯಯನಗಳು**

ಕರ್ನಾಟಕದ ಸಂದರ್ಭದ ಚಿತ್ರಕಲಾ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನಾ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದಾಗಿದೆ. ಏಕೆಂದರೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಗಳ ಕುರಿತಾದ ಅಧ್ಯಯನಕ್ಕೆ ಅವಕಾಶ ದೊರಕಿದ್ದು ತೀರ ಇತ್ತೀಚೆಗಷ್ಟೆ. ೯೦ರದಶಕದಲ್ಲಿ ಈ ಅಧ್ಯಯನಗಳು ತೀವ್ರಗೊಂಡು ಈಗ ಪ್ರೌಢಾವಸ್ಥೆಗೆ ಬಂದು ತಲುಪಿವೆ. ೧೯೮೦ರ ದಶಕದಿಂದ ಕರ್ನಾಟಕದಲ್ಲಿ ನಡೆದ ದೃಶ್ಯಕಲಾ ಅಧ್ಯಯನಗಳ ಸ್ಥೂಲವಾದ ವಿವರವನ್ನು ಈ ಕೆಳಗೆ ಸಮೀಕ್ಷಿಸಿ ಕೊಡಲಾಗಿದೆ.

೧೯೮೦ರ ದಶಕದಿಂದ ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಮೊದಲಬಾರಿಗೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆ ಕುರಿತು ಸಂಶೋಧನಾತ್ಮಕ ಅಧ್ಯಯನ ಪ್ರಾರಂಭಗೊಂಡಿರುವುದು ಕಂಡುಬರುತ್ತದೆ. ಡಾ.ಎಸ್.ಸಿ.ಪಾಟೀಲರು ೧೯೮೩ರಲ್ಲಿ ಕರ್ನಾಟಕ ವಿ.ವಿ.ಯ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ ಮಂಡಿಸಿದ **ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ : ಒಂದು ಅಧ್ಯಯನ** ಎಂಬ ಸಂಶೋಧನ ಕಿರು ಪ್ರಬಂಧವು ಈ ಕ್ಷೇತ್ರದ ಪ್ರಥಮ ಅಧ್ಯಯನದ ಕಾರ್ಯವೆಂದು ದಾಖಲಾಗಿದೆ. ೧೯೮೭ರಲ್ಲಿ

---

೦೩. ಡಾ. ಎಸ್.ಸಿ.ಪಾಟೀಲ : ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ, ಕರ್ನಾಟಕ ವಿ.ವಿ.,೧೯೮೩



ಡಾ.ಬಿ.ಕೆ.ಹಿರೇಮಠರವರು **ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ**[೦೪] ಎಂಬ ಪಿಹೆಚ್.ಡಿ. ಮಹಾಪ್ರಬಂಧದಲ್ಲಿ ಹಸ್ತಪ್ರತಿ ಚಿತ್ರಕಲೆ ಕುರಿತಂತೆ ಕೆಲವು ಅಧ್ಯಾಯಗಳು ಮೀಸಲಾಗಿಟ್ಟ ಅಧ್ಯಯನ ಮಾಡಿದ್ದಾರೆ. ಇದರ ನಂತರ ೧೯೯೧ರಲ್ಲಿ ಕರ್ನಾಟಕದಲ್ಲಿ ಜನಪದ ಚಿತ್ರಕಲೆಯನ್ನೇ ಸಂಶೋಧನೆಯ ಮುಖ್ಯ ವಿಷಯವನ್ನಾಗಿಟ್ಟುಕೊಂಡು ಕರ್ನಾಟಕ ವಿ.ವಿ.ಗೆ ಮಂಡಿಸಿದ ಪಿಹೆಚ್.ಡಿ. ಮಹಾಪ್ರಬಂಧ **ಕರ್ನಾಟಕದ ಜನಪದ ಚಿತ್ರಕಲೆ**[೦೫] ಈ ಮಹಾಪ್ರಬಂಧವನ್ನು ಡಾ.ಎಸ್.ಸಿ.ಪಾಟೀಲರು ಸಿದ್ಧಪಡಿಸಿದ್ದು ದೃಶ್ಯಕಲಾ ಕ್ಷೇತ್ರದ ಮೊದಲ ಅಧ್ಯಯನ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ನಂತರದ ದಿನಗಳಲ್ಲಿ ೧೯೯೫ರಲ್ಲಿ ಡಾ. ಅ.ಲ.ನರಸಿಂಹನ್ ಅವರು ಬೆಂಗಳೂರು ವಿ.ವಿ.ಗೆ ಮಂಡಿಸಿದ ಪಿಎಚ್.ಡಿ. ಮಹಾಪ್ರಬಂಧ **ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು,**[೦೬] ೧೯೯೭ರಲ್ಲಿ ಡಾ.ಸಂಪದಾ ಭಟ್ ಅವರ **ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು,**[೦೭] ಬೆಂಗಳೂರು ವಿಶ್ವವಿದ್ಯಾಲಯಕ್ಕೆ ೧೯೯೭ರಲ್ಲಿ ಡಾ.ಪುಷ್ಪಾ ದ್ರಾವಿಡ ಇವರು ಮಂಡಿಸಿದ **ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ ಜೀವನ ಮತ್ತು ಕಲಾಕೃತಿಗಳು,**[೦೮] ೨೦೦೧ ರಲ್ಲಿ ಡಾ.ಯಾದಪ್ಪ ಪರದೇಶಿಯವರ **ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಒಂದು ಅಧ್ಯಯನ,**[೦೯] ೨೦೦೨ರಲ್ಲಿ ಢಾ.ಶಿವಾನಂದ ಬಂಟನೂರು ಇವರ **ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ,**[೧೦] ೨೦೦೨ರಲ್ಲಿ ಡಾ.ಗಿರೀಶ ಅವರ **ಬುಡಕಟ್ಟು ಚಿತ್ರಕಲೆ,**[೧೧] ೨೦೦೨ರಲ್ಲಿ ಡಾ.ಲಕ್ಷ್ಮಿದೇವಿಗವಾಯಿಯವರ ಕಲಾವಿದ **ಎಂ.ಎ.ಚೆಟ್ಟಿಯವರ ಜೀವನ, ಕಲಾಕೃತಿಗಳು–ಒಂದು ಅಧ್ಯಯನ,**[೧೨] ೨೦೦೨ರಲ್ಲಿ ಶರಣಪ್ಪ ಕೋಲ್ಕಾರ ಅವರ **ಕೊಪ್ಪಳ–ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ,**[೧೩] ೨೦೦೨ರಲ್ಲಿ ಡಾ.ಸೌಮ್ಯ ಅವರ **ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರೆನ್ಸ್ ಟು ಕಾಂಟೆಂಪರರಿ ತಾಂತ್ರಿಕ ಆರ್ಟಿಸ್ಟ್**[೧೪] ೨೦೦೨ರಲ್ಲಿ ಡಾ.ಪ್ರಮೀಳಾ ಲೋಚನ ಅವರ **ಮೈಂಡ್ ಮ್ಯೂಜಿಕ್ ಅಂಡ್ ಕಲರ್ ಎಕ್ಸಪೋಜಿಸ್ ಅಂಡ್ ಡೆವೆಲಪ್ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪರರಿ ಪೇಂಟಿಂಗ್**

---

೦೪. ಡಾ. ಬಿ.ಕೆ.ಹಿರೇಮಠ : ಕನ್ನಡ ಹಸ್ತಪ್ರತಿಗಳು, ಪಿಎಚ್.ಡಿ.ಮ.ಪ್ರ. ಕರ್ನಾಟಕ ವಿ.ವಿ.,೧೯೮೭

೦೫. ಡಾ. ಎಸ್.ಸಿ.ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪಿಎಚ್.ಡಿ.,ಮ.ಪ್ರ.,೧೯೯೧

೦೬. ಡಾ. ಅ.ಲ.ನರಸಿಂಹನ್ ; ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಪಿಎಚ್.ಡಿ.,ಮ.ಪ್ರ., ಬೆಂಗಳೂರು ವಿ.ವಿ.೧೯೯೮

೦೭. ಡಾ. ಸಂಪದಾ ಭಟ್ : ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು, ಪಿಎಚ್.ಡಿ., ಮ.ಪ್ರ., ಕನ್ನಡ ವಿ.ವಿ.೧೯೯೮

೦೮. ಡಾ. ಪುಷ್ಪಾ ದ್ರಾವಿಡ : ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ ಜೀವನ ಮತ್ತು ಕಲಾಕೃತಿಗಳು.ಪಿಹೆಚ್.ಡಿ., ಮ.ಪ್ರ., ಬೆಂಗಳೂರು ವಿ.ವಿ., ೧೯೯೭

೦೯. ಡಾ.ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಪಿಎಚ್.ಡಿ., ಮ.ಪ್ರ., ಕನ್ನಡ ವಿ.ವಿ. ೨೦೦೦

೧೦. ಡಾ.ಶಿವಾನಂದ ಬಂಟನೂರು : ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ, ಪಿಎಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೧೧. ಡಾ.ಗಿರೀಶ : ಬುಡಕಟ್ಟು ಚಿತ್ರಕಲೆ, ಪಿಎಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೧೨. ಡಾ.ಲಕ್ಷ್ಮಿದೇವಿ ಗವಾಯಿ : ಕಲಾವಿದ ಎಂ.ಎ.ಚೆಟ್ಟಿಯವರ ಜೀವನ, ಕಲಾಕೃತಿಗಳು–ಒಂದು ಅಧ್ಯಯನ, ಪಿಎಚ್.ಡಿ. ಮ.ಪ್ರ., ಕನ್ನಡ ವಿ.ವಿ.೨೦೦೨

೧೩. ಡಾ. ಶರಣಪ್ಪ ಕೋಲ್ಕಾರ : ಅವರ ಕೊಪ್ಪಳ–ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ,ಪಿಎಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೧೪. ಡಾ. ಸೌಮ್ಯ : ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರೆನ್ಸ್ ಟು ಕಾಂಟೆಂಪರರಿ ತಾಂತ್ರಿಕಾ ಆರ್ಟಿಸ್ಟ್, ಪಿಎಚ್.ಡಿ., ಮ.ಪ್ರ., ಬೆಂಗಳೂರು ವಿ.ವಿ. ೨೦೦೨

೨೦೦೩ರಲ್ಲಿ ಡಾ.ವೀಣಾ ಶೇಖರ್ ಮಂಡಿಸಿದ **ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ** (೧೭೮೦-೧೮೨೦),[೧೬] ೨೦೦೩ರಲ್ಲಿ ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ ಅವರ **ಕಲಾವಿದ ಆರ್.ಎಮ್.ಹಡಪದ, ಒಂದು ಅಧ್ಯಯನ,**[೧೭] ೨೦೦೩ರಲ್ಲಿ ಡಾ.ಎಸ್.ಸಿ.ಪಾಟೀಲರು ಕರ್ನಾಟಕ ವಿ.ವಿಗೆ ಮಂಡಿಸಿದ **ಎಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯಕೇಶನ್ ಎಟ್ ಸ್ಕೂಲ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೆಷಲ್ ರೆಫೆರೆನ್ಸ್ ಟು ಡ್ರಾಯಿಂಗ ಆಂಡ್ ಪೇಂಟಿಂಗ,** ೨೦೦೪ರಲ್ಲಿ ಡಾ.ಪಿ.ಎಮ್.ಬಾಗಾಯತ್ ಅವರ **ಕರ್ನಾಟಕ ಮುಸ್ಲಿಂ ಅರಸರ ಕಾಲದ** ಚಿತ್ರಕಲೆ, ಒಂದು ಅಧ್ಯಯನ(೧೪೦೦-೧೮೦೦), ೨೦೦೪ರಲ್ಲಿ ಡಾ.ಶಿವಕುಮಾರ ಎ.ಓ. ಅವರ **ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು.**[೨೦] ೨೦೦೫ರಲ್ಲಿ ಡಾ.ಶಶಿಕಲಾ ಹೂಗಾರ **ಕರ್ನಾಟಕ ತೊಗಲುಗೊಂಬೆ ಚಿತ್ರ ಕಲೆ**[೨೧] ೨೦೦೫ರಲ್ಲಿ ಡಾ.ಶಿವಪ್ರಕಾಶ ತುಕ್ಕಣ್ಣವರ ಅವರ **ಕರ್ನಾಟಕ ರಥ ಶಿಲ್ಪಕಲೆ**[೨೨] ೨೦೦೫ರಲ್ಲಿ ಡಾ.ಎಚ್.ಎನ್.ಚಿತ್ರಗಾರ ಅವರ **ಕರ್ನಾಟಕ ಹಸ್ತಪ್ರತಿ ಚಿತ್ರಕಲೆ**[೨೩] ೨೦೦೫ರಲ್ಲಿ ಡಾ. ಎಸ್. ವಿ. ವೆಂಕಟೇಶಯ್ಯ ಅವರ **ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು ಒಂದು ಅದ್ಯಯನ**[೨೪] ೨೦೦೬ರಲ್ಲಿ ಡಾ. ವಿಶ್ವೇಶ್ವರಿ ತಿವಾರಿ ಅವರ **ರಂಗೋಲಿ ಕಲೆ**[೨೫], ಕುರಿತ ಬಂದ ಪಿಹೆಚ್.ಡಿ.ಮಹಾಪ್ರಬಂಧಗಳು. ೨೦೦೫ರಲ್ಲಿ ಡಾ. ಆನಂದ ಪೂಜಾರ ಅವರ **ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ**[೨೬] ೨೦೦೫ರಲ್ಲಿ ಡಾ. ಡಿ. ಎ.

---

೧೫. ಡಾ. ಪ್ರಮೀಳಾ ಲೋಚನ : ಮೈಡ್ ಮ್ಯೂಜಿಕ್ ಅಂಡು ಕಲರ್ ಎಕ್ಷಪೋಜಿಸ್ ಅಂಡ್ ಡೆವೆಲಪ್ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪರರಿ ಪೇಂಟಿಂಗ್, ಪಿಎಚ್.ಡಿ., ಮ.ಪ್ರ., ಬೆಂಗಳುರು ವಿ.ವಿ. ೨೦೦೨

೧೬. ಡಾ.ವೀಣಾ ಶೇಖರ್ : ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦– ೧೮೨೦) ಪಿಎಚ್.ಡಿ.,ಮ.ಪ್ರ.,ಬೆಂಗಳೂರು ವಿ.ವಿ., ೨೦೦೩

೧೭. ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ : ಕಲಾವಿದ ಆರ್.ಎಮ್.ಹಡಪದ, ಒಂದು ಅಧ್ಯಯನ, ಪಿಎಚ್.ಡಿ., ಮ.ಪ್ರ.,ಕನ್ನಡ ವಿ.ವಿ.೨೦೦೩

೧೮. ಡಾ. ಎಸ್.ಸಿ.ಪಾಟೀಲ : ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯಕೇಶನ್ ಆಟ್ ಸ್ಕೂಲ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೆಷಲ್ ರೆಫೆರೆನ್ಸ್ ಟು ಡ್ರಾಯಿಂಗ್ ಆಂಡ್ ಪೇಂಟಿಂಗ, ಕರ್ನಾಟಕ ವಿ.ವಿ., ೨೦೦೩

೧೯. ಡಾ. ಪಿ.ಎಮ್.ಬಾಗಾಯತ್ : ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಒಂದು ಅಧ್ಯಯನ(೧೪೦೦–೧೮೦೦), ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೪

೨೦. ಡಾ.ಶಿವಕುಮಾರ ಎ.ಓ. : ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು, ಪಿಹೆಚ್.ಡಿ. ಮಹಾ ಪ್ರಬಂಧ ಗು.ವಿ.ಗು. ೨೦೦೪

೨೧. ಡಾ.ಶಶಿಕಲಾ ಹೂಗಾರ : ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೨೨. ಡಾ.ಶಿವಪ್ರಕಾಶ ತುಕ್ಕಣ್ಣವರ : ಕರ್ನಾಟಕ ರಥ ಶಿಲ್ಪಕಲೆ, ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೨೩. ಡಾ.ಎಚ್.ಎನ್.ಚಿತ್ರಗಾರ : ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೨೪. ಡಾ.ಎಸ್.ವಿ. ವೆಂಕಟೇಶಯ್ಯ : ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೨೫. ವಿಶ್ವೇಶ್ವರಿ ತಿವಾರಿ : ರಂಗೋಲಿ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ ಗು.ವಿ.ವಿ.,೨೦೦೬



ಉಪಾಧ್ಯ ಅವರ **ದೃಶ್ಯಕಲೆಗಳ ತೌಲನಿಕ ಅಧ್ಯಯನ**[27] ಡಿ.ಲಿಟ್. ಮಹಾಪ್ರಬಂಧವಾಗಿದೆ.

೨೦೦೨ರಲ್ಲಿ ಮಲ್ಲಿಕಾರ್ಜುನ ಬಾಗೋಡಿಯವರು ಎಂ.ಫಿಲ್. ಪದವಿಗಾಗಿ ಮಂಡಿಸಿದ **ಚಿತ್ರಕಲಾವಿದ ಜೆ.ಎಸ್.ಖಂಡೇರಾವ-ಒಂದು ಅಧ್ಯಯನ.**[28] ಮತ್ತು ೨೦೦೩ರಲ್ಲಿ ಎ.ಎಸ್.ವಿಶ್ವನಾಥ ಅವರ **ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ.**[29] ೨೦೦೫ರಲ್ಲಿ ಶಂಕರಪ್ಪ ಎಂ. ಕುಂದಗೋಳ ಅವರ **ಕಲಾವಿದ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು.**[33] ಮತ್ತು ಸಿ.ಡಿ.ಜಟ್ಟೆಣ್ಣವರ ಅವರ **ಕಲಾವಿದ ಡಾ.ಎಂ.ವಿ.ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳು**[30] ೨೦೦೬ರಲ್ಲಿ ಸುಚಿತ್ರಾ ಗ. ಲಿಂಗದಳ್ಳಿ ಇವರ **ವಿಜಯನಗರದ ಭಿತ್ತಿಚಿತ್ರಕಲೆ ಒಂದು ಅಧ್ಯಯನ,**[31] ಮತ್ತು ರವಿ ವಸರಾಮ ನಾಯಕ ಇವರ **ಕಿನ್ನಾಳ ಕಲೆ ಒಂದು ಅಧ್ಯಯನ**[32] ಈ ಪ್ರಬಂಧಗಳು ಕರ್ನಾಟಕ ದೃಶ್ಯಕಲೆಯ ಕುರಿತಾಗಿ ಬಂದ ಸಂಶೋಧನಾ ಅಧ್ಯಯನಗಳಾಗಿವೆ. ಈಗ ಗುಲ್ಬರ್ಗಾ, ಬೆಂಗಳೂರು, ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಕನ್ನಡ ವಿಶ್ವವಿದ್ಯಾಲಯಗಳಲ್ಲಿ ಪಿಎಚ್.ಡಿ.ಅಧ್ಯಯನಕ್ಕೆ ಹಲವಾರು ವಿದ್ಯಾರ್ಥಿಗಳು ಸ್ಪರ್ಧೆಯಾಗಿ ಅಧ್ಯಯನ ನಿರತರಾಗಿದ್ದಾರೆ. ಇದಲ್ಲದೇ ಅನೇಕ ಬಿ.ಎಫ್.ಎ.ಪದವಿ ಹಾಗೂ ಎಮ್.ವಿ.ಎ. ಪದವಿ, ಎಮ್.ಎಫ್.ಎ. ಪದವಿ ತರಗತಿಗಳಿಗೆ ಅಧ್ಯಯನದ ಭಾಗವಾಗಿ ಕಿರು ಸಂಶೋಧನಾ ಪ್ರಬಂಧಗಳು ರಚನೆಯಾಗಿದ್ದು, ಅವುಗಳ ಸಂಖ್ಯೆ ನೂರೈವತ್ತಕ್ಕೂ ಮಿಕ್ಕಿದೆ. ಹೀಗೆ ಈ ಕ್ಷೇತ್ರದಲ್ಲಿ ಸಂಶೋಧನೆಗಳು ತೀವ್ರವಾಗಿ ಮುನ್ನಡೆಯುತ್ತಲಿದ್ದು, ಭವಿಷ್ಯತ್ತಿನಲ್ಲಿ ಕಲಾಕ್ಷೇತ್ರವು ಸಂಶೋಧನಾತ್ಮಕವಾಗಿಯೂ ಬಲಗೊಳ್ಳುವ ಆಶಯವನ್ನು ನಿರೀಕ್ಷಿಸಬಹುದು.

**ಸಂತ ಶುಭರಾಯರ ಕುರಿತು ನಡೆದ ಅಧ್ಯಯನಗಳ ಅವಲೋಕನ**

ಸಂತ ಶುಭರಾಯರ ಕುರಿತು ಬಂದ ಲೇಖನಗಳ, ಕಿರು ಪ್ರಬಂಧಗಳ ಕುರಿತ ಎಲ್ಲಾ ವಿವರಗಳನ್ನು ಸಂಗ್ರಹಿಸಿದ್ದು ಅವುಗಳನ್ನು ಇಲ್ಲಿ ಅವಲೋಕಿಸಲಾಗಿದೆ. ಶುಭರಾಯರ ಕುರಿತು ಸಿಗುವ ಮೊದಲ ದಾಖಲೆಯಂದರೆ ೧೭೯೨ರಲ್ಲಿ ಬ್ರಿಟೀಷ್ ಅಧಿಕಾರಿ ಜಾನ್ ಕೆನ್ವಾವೆ ದಾಖಲಿಸಿದ ಮಿಲಿಟರಿ ಸೆಂಡ್ರಿಸ್ ಜರ್ನಲ್‌ದಲ್ಲಿ ಟಿಪ್ಪುವಿನ ವಕೀಲ ಮತ್ತು ಲಾರ್ಡ್‌ಕಾರ್ನ್ ವಾಲೀಸ್‌ರವರ ಸಂಭಾಷಣೆಯ ವಿವರದ

---

೨೬ ಡಾ.ಆನಂದ ಕೆ. ಪೂಜಾರ : ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ, ಡಿ.ಲಿಟ್. ಮ.ಪ್ರ.ಕನ್ನಡವಿ.ವಿ.,೨೦೦೫

೨೭ ಡಾ. ಡಿ. ಎ. ಉಪಾಧ್ಯ ಅವರ ದೃಶ್ಯಕಲೆಗಳ ತೌಲನಿಕ ಅಧ್ಯಯನ, ಡಿ.ಲಿಟ್. ಮ.ಪ್ರ.ಕನ್ನಡವಿ.ವಿ.,೨೦೦೫

೨೮. ಮಲ್ಲಿಕಾರ್ಜುನ ಬಾಗೋಡಿ : ಚಿತ್ರಕಲಾವಿದ ಜೆ.ಎಸ್.ಖಂಡೇರಾವ-ಒಂದು ಅಧ್ಯಯನ.ಎಂ.ಫಿಲ್. ಪ್ರ. ಕ.ವಿ.ವಿ.ಹಂ. ೨೦೦೨

೨೯. ಎ.ಎಸ್.ವಿಶ್ವನಾಥ :ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ. ಎಂ.ಫಿಲ್.ಪ್ರ. ಕ.ವಿ.ವಿ.ಹಂ. ೨೦೦೩

೩೦. ಸಿ.ಡಿ.ಜಟ್ಟೆಣ್ಣವರ : ಕಲಾವಿದ ಡಾ.ಎಂ.ವಿ.ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳುಎಂ.ಫಿಲ್. ಪ್ರ., ಕ.ವಿ.ವಿ.ಹಂ. ೨೦೦೫

೩೧. ಸುಚಿತ್ರಾ ಗ. ಲಿಂಗದಳ್ಳಿ ಇವರ ವಿಜಯನಗರದ ಭಿತ್ತಿಚಿತ್ರಕಲೆ ಒಂದು ಅಧ್ಯಯನ, ಎಂ.ಫಿಲ್. ಪ್ರ., ಕ.ವಿ.ವಿ.ಹಂ. ೨೦೦೬

೩೨. ರವಿ ವಸರಾಮ ನಾಯಕ ಇವರ ಕಿನ್ನಾಳ ಕಲೆ ಒಂದು ಅಧ್ಯಯನ ಎಂ.ಫಿಲ್. ಪ್ರ., ಕ.ವಿ.ವಿ.ಹಂ. ೨೦೦೫

೩೩ . ಶಂಕರಪ್ಪ ಎಂ. ಕುಂದಗೋಳ : ಕಲಾವಿದ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು. ಎಂ.ಫಿಲ್. ಪ್ರ. ಕ.ವಿ.ವಿ.ಹಂ. ೨೦೦೫



ಮಾಹಿತಿ ದೊರೆಯುತ್ತದೆ.[1] ಟಿಪ್ಪುವಿನ ವಕೀಲ ಸಂತ ಶುಭರಾಯವಾಗಿದ್ದು ಇದು ಶುಭರಾಯನ ಕುರಿತು ಸಿಗುವ ಮಹತ್ವದ ದಾಖಲೆಯಾಗಿದೆ. ಹೆಚ್ಚಿನ ವಿವರಗಳಿಲ್ಲ.

೧೯೦೮ರಲ್ಲಿ ರಾಮಜೋಸಿಯವರ 'ಲಾವಣ್ಯಕೃತಿ'[2] ಯಲ್ಲಿ ಸಂತ ಶುಭರಾಯರು ರಚಿಸಿದ ಸಾಹಿತ್ಯವನ್ನು ಪರಿಚಯಿಸಲಾಗಿದೆ. ಸಾಂದರ್ಭಿಕವಾಗಿ ಅವರ ಚಿತ್ರಗಳನ್ನು ಹೆಸರಿಸಲಾಗಿದೆ.

೧೯೧೩ರಲ್ಲಿ ರಚನೆಯಾದ 'ಮಹಾರಾಷ್ಟ್ರ ಕವಿಚರಿತ್ರೆ'[3] ೨ನೇ ಭಾಗದಲ್ಲಿ ಶ್ರೀ ಜಗನಾಥ ರಘುನಾಥ ಅಜಗಾಂವ್‌ಕರ್ ಅವರು ಕವಿಯಾಗಿ ಶುಭರಾಯರು ರಚಿಸಿದ ಅಭಂಗಗಳ ಕುರಿತು ಅವರು ಸ್ಥೂಲವಾದ ಪರಿಚಯವನ್ನು ಮಾಡಿಕೊಡಲಾಗಿದೆ.

೧೯೨೮ರಲ್ಲಿ 'ಮಹಾರಾಷ್ಟ್ರ ಸಾರಸ್ವತ ಭಾಗ ೨'[4] ರಲ್ಲಿ ಲಕ್ಷ್ಮಣ ವಿನಾಯಕ ಭಾವೆಯವರು ಮಹಾರಾಷ್ಟ್ರದ ಸಾಹಿತ್ಯ, ಸಾಂಸ್ಕೃತಿ ಪರಿಸರವನ್ನು ಸ್ಥೂಲವಾಗಿ ಪರಿಚಯಿಸಿದ್ದು ಅಲ್ಲಿ ಶುಭರಾಯರ ಸಾಹಿತ್ಯದ ಪ್ರಸ್ತಾಪವಿದೆ.

೧೯೩೦ರಲ್ಲಿ 'ಮರಾಠಿ ಕವಿತೆ ಭಾ ಉಶಾಕಾಲ ಕಿಂವಾ ಮರಾಠಿ ಶಾಹಿರ'[5] ಕೃತಿಯಲ್ಲಿ ಶ್ರೀಪಾದ ಮಹಾದೇವ ವರ್ದ ಅವರು ಶುಭರಾಯರ ಕವಿತೆಗಳನ್ನು ಮರಾಠಿ ಕವಿತೆಗಳ ಸಾಲಿನಲ್ಲಿ ಉಲ್ಲೇಖಿಸಿದ್ದಾರೆ. ಶುಭರಾಯ ಕವಿ, ಕಲಾವಿದರಾಗಿ ಆಧ್ಯಾತ್ಮಸಾಧನೆಗಾಗಿ, ಕಲೆ, ಸಾಹಿತ್ಯವನ್ನು ಬಳಸಿಕೊಂಡ ಕುರಿತು ಚರ್ಚಿಸಲಾಗಿದೆ.

೧೯೩೭ರಲ್ಲಿ 'ಭಾರತ ವರ್ಷಿಯ ಮಧ್ಯಯುಗೀನ ಚರಿತ್ರಾ ಕೋಶ' ದಲ್ಲಿ ಶ್ರೀ ಸಿದ್ಧೇಶ್ವರ ಶಾಸ್ತ್ರಿ ಚಿತ್ರಾವ ಅವರು ಶುಭರಾಯರನ್ನು ಅವರ ಸಂಗೀತ, ಸಾಹಿತ್ಯ, ಕಲೆ, ನೃತ್ಯ, ಮುಂತಾದ ಸಾಧನೆಯ ಸ್ಥೂಲ ನೋಟವನ್ನು ನೀಡಿದ್ದಾರೆ.

೧೯೪೩ರಲ್ಲಿ 'ಮೆರೋ ಪಾತ್ರ'[7] : ಚರಿತ್ರೆ ಅಣಿ ಕಾವ್ಯವಿವೇಚನ ಗ್ರಂಥದಲ್ಲಿ ಶ್ರೀ ಲಕ್ಷ್ಮಣ ರಾಮಚಂದ್ರ ಪಾಂಗಾರಕರ ಅವರು ಶುಭರಾಯರ ಕಾವ್ಯದ ಕುರಿತು ಕವಿಯ ಕುರಿತು ಹೇಳುವಾಗ ಚಿತ್ರ ಕಲೆಯನ್ನು ಹೆಸರಿಸಿದ್ದಾರೆ. ಹೆಚ್ಚಾಗಿ ಶುಭರಾಯರನ್ನು ಕವಿಯಾಗಿಯೇ ಗುರುತಿಸಲಾಗಿದೆ.

೧೯೫೧ರಲ್ಲಿ ಕೃತಿ ಬರೆದ 'ಹಿಸ್ಟರಿ ಅಫ್ ಟಿಪ್ಪುಸುಲ್ತಾನ್'ದಲ್ಲಿ ಮೊಹಿಬುಲ್ ಹಸನ್‌ಖಾನ್

೧. ಮಿಲಿಟರಿ ಸೆಂಡ್ರಿಸ್ : ತಮಿಳುನಾಡು ಪತ್ರಾಗಾರ ಎಗ್ಮೋರ್ (೧೮೯೨) ಪು. ೧೦೬.

೨. ಶ್ರೀ ಶಂಕರ ತುಕಾರಾಂ ತಾಳಿಗ್ರಾಮ್ : 'ರಾಮಜೋಶಿಕೃತ ಲಾವಣ್ಯ' ಚಿತ್ರಶಾಲಾ ಪ್ರಸ್.ಪುಣೆ. (೧೯೧೮) ಪು. ೯೮

೩. ಶ್ರೀ ಜಗನಾಥ. ರಾಮನಾಥ ದಾಮೋಧರ್ ಸಾಂವಳರಾಂ ಮತ್ತು ಮಂಡಳಿ : 'ಮಹಾರಾಷ್ಟ್ರ ಸಾರಸ್ವತ ಭಾಗ-೨' ಟಾಕೂರ್‌ದ್ವಾರ್ ಮುಂಬೈ. (೧೯೧೩) ಪು. ೯೮.

೪. ಲಕ್ಷಣ ವಿನಾಯಕ್ ಬಾವೆ : 'ಮಹಾರಾಷ್ಟ್ರ ಸಾರಸ್ವತ ಭಾಗ-೨' ಠಾಣೆ ಮೂರನೇ ಆವೃತ್ತಿ (೧೯೨೮) ಪು. ೨೯೭

೫. ಶ್ರೀಪಾದ ಮಹಾದೇವ್ ವರ್ದ : 'ಮರಾಠ ಕವಿತೇಚಾ ಉಷಾಃಕಾಲ ಕಿಂವಾ ಮರಾಠಿ ಶಾಹಿರಿ' ಗರಗಾಂವ್. ಮುಂಬೈ-೪ (೧೯೩೦) ಪು. ೮೮-೮೯

೬. ವಿದ್ಯಾವಾರಿಧಿ ಸಿದ್ಧೇಶ್ವರ ಶಾಸ್ತ್ರಿ : 'ಭಾರತ ವರ್ಷಿಯ ಮಧ್ಯಯುಗೀನ ಚರಿತ್ರ ಕೋಶ' ಭಾರತ ವರ್ಷಿಯ ಮಧ್ಯಯುಗೀನ ಚರಿತ್ರ ಕೋಶ ಮಂಡಳಿ. (೧೯೩೭) ಪು. ೭೮೨

೭. ಲಕ್ಷ್ಮಣ ರಾಮಚಂದ್ರ ಪಾಂಗಾರಕರ್ : 'ಮೋರೋಪಾತ್ರಃ ಚರಿತ್ರ ಅಣಿಕಾವ್ಯ ವಿವೇಚನೆ' ಪತಾಂಜಿ ಮಿತ್ರ ಮಂಡಳಿ. ಪಬ್ಲಿಷಿಂಗ್ ಹೌಸ್. ಚೀರಾ ಬಜಾರ್. ಮುಂಬೈ (೧೯೪೩) ಪು. ೧೨೬



ಅವರು ಟಿಪ್ಪುವಿನ ಜೀವನ ಚರಿತ್ರೆಯನ್ನು ಪರಿಚಯಿಸುವ ಸಂದರ್ಭದಲ್ಲಿ ಶುಭರಾಯರನ್ನು ಸಾಂದರ್ಭಿಕವಾಗಿ ಉಲ್ಲೇಖಿಸಲಾಗಿದೆ.

೧೯೬೦ರಲ್ಲಿ ಶ್ರೀ ಭೀಮಾ ಶಂಕರ್ ಪಾಟಣೆಯವರು 'ಶುಭರಾಯಕಾ ಚಿತ್ರ ಸಂಪ್ರದಾಯ' ಎಂಬ ಲೇಖನವನ್ನು ಧರ್ಮಯುಗ ಪತ್ರಿಕೆಯಲ್ಲಿ ಮೊದಲ ಬಾರಿಗೆ ಶುಭರಾಯರ ಚಿತ್ರಗಳನ್ನು ಇಲ್ಲಿ ಪರಿಚಯಿಸಲಾಗಿದೆ.

೧೯೬೩ರಲ್ಲಿ 'ಶ್ರೀ ಕುಂಜಬಿಹಾರಿ ಅವರು ಸಂತ ಕವಿ ಶುಭರಾಯರ' ಕುರಿತು ಕೃತಿಯನ್ನು ರಚಿಸಿದ್ದು ಇಲ್ಲಿ ಕವಿಯಾಗಿ, ಬರಹಗಾರರಾಗಿ, ಕಲಾವಿದರಾಗಿ ಶುಭರಾಯರು ಮಾಡಿದ ಸಾಧನೆಯ ಸ್ಥೂಲ ನೋಟವಿದೆ.

೧೯೭೦ರಲ್ಲಿ ಶ್ರೀಪು.ಜ. ಬುವಾ ಅವರು 'ರಸಿಕ ಕಲಾವಂತ ಸಂತ ಕವಿ ಶ್ರೀ ಶುಭರಾಯ' ಎಂಬ ಲೇಖನದಲ್ಲಿ ಶುಭರಾಯರ ರಸಿಕತೆಯ ಪ್ರತೀಕವಾಗಿ ಬಂದಿರುವ ಶ್ರೀಕೃಷ್ಣ ಲೀಲೆಯ ಚಿತ್ರಗಳನ್ನು ವಿಶ್ಲೇಸಿದ್ದಾರೆ. ಕಲಾವಿದ ಶುಭರಾಯ ಕೃತಿಗಳ ಕುರಿತು ಚರ್ಚಿಸಿದ ಲೇಖನವಾಗಿದೆ.

೧೯೭೩ರಲ್ಲಿ ಪ್ರೋ. ಆರ್.ಶ್ರೀ ಜೋಗ್ ಅವರು ಸಂಪಾದಿಸಿದ ಮರಾಠಿ 'ವಾಂಜಯಂಚಾ ಇತಿಹಾಸ' ಗ್ರಂಥದಲ್ಲಿ ಸಾಂದರ್ಭಿಕವಾಗಿ ಕವಿ, ಸಂತಕಲಾವಿದ ಶುಭರಾಯರನ್ನು ಉಲ್ಲೇಖಿಸಿ ಪರಿಚಯಿಸಲಾಗಿದೆ.

೧೯೭೫ರಲ್ಲಿ ಶ್ರೀ ಗ.ಬ್ಯಂ. ಕುಲಕರ್ಣಿಯವರು 'ಕಲಾಮರ್ಮಜ್ಞ ಸಂತ ಶುಭರಾಯ' ಎಂಬ ಲೇಖನದಲ್ಲಿ ಶುಭರಾಯರ ಕಲಾಕೃತಿಗಳ ವಸ್ತುವಿಷಯ ರಚನಾ ತಂತ್ರಗಾರಿಕೆಯನ್ನು ಕುರಿತು ಚರ್ಚಿಸಿದ್ದಾರೆ.

೧೯೭೬ರಲ್ಲಿ ಶ್ರೀ ಮಹಾದೇಶ ಶಾಸ್ತ್ರಿ ಜೋಷಿಯವರು ಸಂಪಾದಿಸಿದ 'ಭಾರತ ಸಂಸ್ಕೃತ ಕೋಶ ಖಂಡ–೯' ರಲ್ಲಿ ಸಂತ ಶುಭರಾಯರ ಕುರಿತು ಸ್ಥೂಲವಾದ ಮಾಹಿತಿಯನ್ನು ದಾಖಲಿಸಿದ್ದಾರೆ. ಹೆಚ್ಚಿನ ವಿವರಗಳಿಲ್ಲ.

---

೮. ಮೋಹಿಬುನ್ ಹಸನ್‌ಖಾನ್ : 'ಹಿಸ್ಟರಿ ಆಫ್ ಟಿಪ್ಪುಸುಲ್ತಾನ್' ಬಿನ್‌ಲಿಯೋ ಪೈಲ್ ಲಿ. ಕಲ್ಕತ್ತಾ. (೧೯೫೧) ಪು. ೨೬೧

೯. ಶ್ರೀಭೀಮಾ ಶಂಕರ್ ಪಾಟಣೆ. : 'ಶುಬರಾಯಕ ಚಿತ್ರ ಸಂಪ್ರದಾಯ' ಡಾ. ಧರ್ಮವೀರಭಾರತಿ : 'ಧರ್ಮಯುಗ' ಟೈಮ್ಸ್ ಆಫ್ ಇಂಡಿಯಾ (೧೯೬೦) ಪು. ೩೫

೧೦. ಶ್ರೀ ಕುಜ ಬಿಹಾರಿ : 'ಶ್ರೀ ಸಂತ ಕವಿ ಶುಭರಾಯ' ಶ್ರೀ ಗೀತಾ ಗುರುನಾಥ ಪ್ರಕಾಶನ. ಸೊಲ್ಲಾಪುರು. (೧೯೬೩) ಪು.೨.೩.೪

೧೧. ಶ್ರೀ ಪು.ಜ. ಬುವಾ : 'ರಸಿಕ ಕಲಾವಿದ ಸಂತ ಕವಿ ಶ್ರೀ ಶುಭರಾಯ' : ತರುಣ್ ಭಾರತ ಪುಣೆ. (೧೯೭೦) ಪು. ೨.೨೫.೩೩

೧೨. ಪ್ರೋ.ರ.ಶ್ರೀಜೋಗ್ : 'ಮರಾಠಿ ವಾಂಙ್ಮಯಂಚಾ ಇತಿಹಾಸ' : ಮಹಾರಾಷ್ಟ್ರ ಸಾಹಿತ್ಯ ಪರಿಷತ್. ಪುಣೆ. (೧೯೭೩) ಪು. ೩೩೩

೧೩. ಶ್ರೀ ಗ.ಬೆಂ. ಕುಲಕರ್ಣಿ : 'ಕಲಾಮರ್ಮಜ್ಞ ಸಂತ ಶುಭರಾಯ' (ಲೇಖನ) ಲೋಕಪ್ರಭಾ ಮುಂಬೈ. (೧೯೭೬) ಪು. ೧೩.

೧೪. ಶ್ರೀಮಹಾದೇವ ಶಾಸ್ತ್ರಿ ಜೋಶಿ : 'ಭಾರತೀಯ ಸಂಸ್ಕೃತಿಯ ಕೋಶ–೯' : ಸಂಸ್ಕೃತ ಕೋಶ ಮಂಡಳಿ. ಪುಣೆ (೧೯೭೬) ಪು. ೪೦೯



೧೯೮೦ರಲ್ಲಿ ಶ್ರೀ ಗುರುದೇವ ಶರಣ ಅವರು 'ದ ಆರ್ಟ ಆಫ್ ಶುಭರಾಯ ಮಹಾರಾಜ' ಎಂಬ ಲೇಖನದಲ್ಲಿ ಶುಭರಾಯರ ವರ್ಣಕಲಾಕೃತಿಗಳನ್ನು ಪರಿಚಯಿಸಿದ್ದಾರೆ.

೧೯೮೨ರಲ್ಲಿ ಡಿ.ಪಿ. ತಿವಾರಿಯವರು 'ಸಂತ ಶುಭರಾಯ ವ್ಯಕ್ತಿ ಅನುಕಾವ್ಯ' ಎಂಬ ಸಂಶೋಧನಾ ಯೋಜನೆಯಲ್ಲಿ ಶುಭರಾಯರ ಸಮಗ್ರ ಕಾವ್ಯವನ್ನು ಮತ್ತು ವ್ಯಕ್ತಿ ಚರಿತ್ರೆಯನ್ನು ಪರಿಚಯಿಸಿದ್ದಾರೆ. ಹಾಗೆಯೇ ಪೂರಕಾವಾಗಿ ಚಿತ್ರಗಳ ಪ್ರಸ್ತಾಪವನ್ನು ಮಾಡಿದ್ದಾರೆ.

೧೯೮೪ರಲ್ಲಿ ಕರ್ನಾಟಕದಲ್ಲಿ ಎನ್.ಸಿ. ದೇಸಾಯಿಯವರು 'ಅಜ್ಞಾತ ಸಂತ ಚಿತ್ರಕಾರ ಶುಭರಾಯ' ಚಿತ್ರಲೇಖನವನ್ನು ಉದಯವಾಣಿ ವಿಶೇಷಾಂಕದಲ್ಲಿ ವಿವರವಾಗಿ ಪ್ರಕಟಿಸಿ ಶುಭರಾಯನ ಕಲಾಕೃತಿಗಳನ್ನು ಕರ್ನಾಟಕದ ಕಲಾವಿದರಿಗೆ ಪರಿಚಹಿಸಿದ್ದಾರೆ.

೧೯೮೫ರಲ್ಲಿ ಎಂ.ಸಿ. ದೇಸಾಯಿಯವರು ಶುಭರಾಯರ ದಶಾವತಾರ ಚಿತ್ರಗಳನ್ನು 'ಕಸ್ತೂರಿ ವಿಶೇಷಾಂಕ' ದಲ್ಲಿ ಮತ್ತು ೧೯೮೬ರಲ್ಲಿ ಪ್ರಜಾಮತ ದೀಪಾವಳಿ ವಿಶೇಷಾಂಕದಲ್ಲಿ ಸಂತ ಶುಭರಾಯರ ಚಿತ್ರ ಹಾಗೂ ಜೀವನ ಸಾಧನೆಯ ವಿವರಗಳಿವೆ.

೧೯೯೨ರಲ್ಲಿ ಎನ್.ಸಿ. ದೇಸಾಹಿಯವರು ಬರೆದ 'ಅಜ್ಞಾತ ಸಂತ ಚಿತ್ರಕಾರ ಶುಭರಾಯ' ಎಂಬ ಲೇಖನ ಸಂಯುಕ್ತ ಕರ್ನಾಟಕ ವಿಷಯ ಸಂಚಿಕೆಯಲ್ಲಿ ಬಂದಿದೆ. ೧೯೯೩ರಲ್ಲಿ ಕರ್ನಾಟಕ ಲಲಿತಾಕಲಾ ಅಕಾಡೆಮಿ ಪ್ರಕಟಿಸಿದ ಕಿರು ಪುಸ್ತಕ ಸಂತ ಶುಭರಾಯದಲ್ಲಿ ಅವರ ಜೀವನ ಕಲಾಕೃತಿಗಳ ಕುರಿತು ವಿಚಾರ ಸಂಕಿರಣದ ಲೇಖನಗಳಿವೆ. ಇಲ್ಲೆಲ್ಲ ಸ್ಥೂಲವಾದ ವಿವರಗಳಿವೆ.

ಈ ಮೇಲಿನ ಎಲ್ಲಾ ಬರಹಗಳು ಶುಭರಾಯರ ಕುರಿತು ತುಂಡು ತುಂಡು ಮಾಹಿತಿಯನ್ನು ಒಳಗೊಂಡಿವೆ. ಶುಭರಾಯರ ಸಮಗ್ರ ಜೀವನ ಸಾಧನೆ ಅವರ ನೂರಾರು ವರ್ಣಚಿತ್ರಕಲಾ ಕೃತಿಗಳ ವ್ಯವಸ್ಥಿತವಾದ ಅಧ್ಯಯನ ಇಲ್ಲಿಯವರೆಗೆ ನಡೆಯದೇ ಇರುವುದನ್ನು ಗಮನಿಸಿ ಪ್ರಸ್ತುತ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

---

೧೫. ಶ್ರೀಗುರು ದೇವ ಶರಣ : 'ದ ಆರ್ಟ ಆಫ್ ಶುಭರಾಯ ಮಹಾರಾಜ' ; ದ ವೀಕ್ಲೀ ಆಫ್ ಇಂಡಿಯಾ (೧೯೮೦) ಪು.೨೫.

೧೬. ಡಾ. ಜಿ.ಡಿ. ತಿವಾರಿ : 'ಸಂತ ಶುಭರಾಯ. ಅಣಿ ಕಾವ್ಯ' : ಭಾರತ ಸರ್ಕಾರ ವಿಶ್ವವಿದ್ಯಾಲಯದಿಂದ ಅನುಮೋದಿತಗೊಂಡ ಗ್ರಂಥ (೧೯೮೨)

೧೭. ಶ್ರೀ ಎನ್.ಸಿ. ದೇಸಾಯಿ. : 'ಅಜ್ಞಾತ ಸಂತ ಚಿತ್ರಗಾರ ಶುಭರಾಯ' ;ಲೇಖನ ಉದಯವಾಣಿ (೧೯೮೪) ಪು. ೨೦.

೧೮. ಶ್ರೀ ಎನ್.ಸಿ ದೇಸಾಯಿ : 'ಶುಭರಾಯರ ದಶಾವತಾರ ಚಿತ್ರಗಳು' ಕಸ್ತೂರಿ ವಿಶೇಂಷಾಕ (೧೯೮೬)

೧೯. ಶ್ರೀ ಎನ್.ಸಿ ದೇಸಾಯಿ : 'ಅಜ್ಞಾತ ಚಿತ್ರಕಾರ ಶುಭರಾಯ' ಲಲಿತಾಕಲಾ ಅಕಾಡಮಿ ಬೆಂ. (೧೯೯೩)



**ಅಧ್ಯಯನದ ವ್ಯಾಪ್ತಿ :**

ಈ ಅಧ್ಯಯನವು ಸಂತ ಶುಭರಾಯರ ಜೀವನ ಮತ್ತು ಕಲಾಕೃತಿಗಳ ಕುರಿತಾಗಿದ್ದು ಇದು ಕರ್ನಾಟಕ ಮತ್ತು ಮಹಾರಾಷ್ಟ್ರ ಪ್ರದೇಶವು ಈ ಅಧ್ಯಯನದ ವ್ಯಾಪ್ತಿಯಲ್ಲಿ ಒಳಗೊಳ್ಳುತ್ತದೆ. ಶುಭರಾಯರು ಕರ್ನಾಟಕದಲ್ಲಿ ಜನಿಸಿ ನಂತರ ಸೊಲ್ಲಾಪುರುದಲ್ಲಿ ತನ್ನ ಕೊನೆಯ ದಿನಗಳನ್ನು ಕಳೆದಿದ್ದು ಕರ್ನಾಟಕ ಮತ್ತು ಮಹಾರಾಷ್ಟ್ರ ಇವರ ಕಾರ್ಯಕ್ಷೇತ್ರವಾಗಿದ್ದು ಅಧ್ಯಯನದ ವ್ಯಾಪ್ತಿಯು ಪ್ರಮುಖವಾಗಿ ಈ ಪ್ರದೇಶವಾಗಿದ್ದರೂ ಪೂರಕವಾಗಿ ಬೇರೆ ಬೇರೆ ರಾಜ್ಯಗಳ ಕಲೆಯನ್ನು ಸಾಂದರ್ಭಿಕವಾಗಿ ಬಳಸಿಕೊಂಡು ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ಸ್ವರೂಪ :**

ಪ್ರಸುತ್ತ ಅಧ್ಯಯನವನ್ನು ಏಳು ಅಧ್ಯಾಯಗಳಲ್ಲಿ ವಿಂಗಡಿಸಿದ್ದು, ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿಸುವ ವಿಷಯದ ಕುರಿತಂತೆ ಅದರ ಸಂಕ್ಷಿಪ್ತ ಸ್ವರೂಪದ ವಿವರವನ್ನು ಇಲ್ಲಿ ಕೊಡಲಾಗಿದೆ.

**ಮೊದಲನೆಯ ಅಧ್ಯಾಯದಲ್ಲಿ** : ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ವೈದಾನಿಕತೆ ಕುರಿತು ಮೂಲ ಆಕರ ಸಾಮಗ್ರಿ ಮತ್ತು ಆನುಷಂಗಿಕ ಆಕರ ಸಾಮಗ್ರಿ ಕುರಿತಾದ ವಿವರಣೆ ನೀಡಲಾಗುವುದು.

**ಎರಡನೆಯ ಅಧ್ಯಾಯದಲ್ಲಿ** : ಸಂತ ಶುಭರಾಯರ ಜೀವನ ಕುರಿತು ಹಾಗೆಯೇ ಈ ಕಲಾವಿದ ಬೆಳೆದು ಬಂದ ಹಿನ್ನೆಲೆ ಹುಟ್ಟಿದ ಸ್ಥಳ, ಹಾಗೂ ಶುಭರಾಯರು ಆಡುವ ಭಾಷೆಗಳು ಮತ್ತು ಟಿಪ್ಪುಸುಲ್ತಾನನ ಬಳಿ ಉಪಪ್ರಧಾನಮಂತ್ರಿಯಾಗಿ ಸೇವೆಮಾಡಿದ್ದು, ಅಲ್ಲದೆ ಒಬ್ಬ ಸಂಗೀತಗಾರ, ನೃತ್ಯಗಾರ, ಕವಿ. ಇತ್ಯಾದಿ ಬಹುಮುಖ ವ್ಯಕ್ತಿತ್ವದ ಕುರಿತು ಇಲ್ಲಿ ಪೂರಕವಾಗಿ ಚರ್ಚಿಸಲಾಗಿದೆ. ಮತ್ತು ಹೊರರಾಜ್ಯದ ಸೊಲ್ಲಾಪೂರ ಪ್ರದೇಶದ ನೆಲೆಸಿ ರಾಜಾಶ್ರಯಪಡೆದು ಹಾಗೂ ಆ ಪ್ರದೇಶದ ಚಾರಿತ್ರಿಕ, ಐತಿಹಾಸಿಕ ಹಿನ್ನಲೆಯಲ್ಲಿ ಕಾವ್ಯಗಳನ್ನು ರಚಿಸಿ, ಮತ್ತು ನೂರಾರು ವರ್ಣಚಿತ್ರವನ್ನು ರಚಿಸಿದ ವಿವರವನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಮತ್ತು ಅವರ ಕಲಾಕೃತಿಗಳನ್ನು ಅಧ್ಯಯನಕ್ಕಾಗಿ ದಶಾವಾತಾರ, ಮಹಾಭಾರತ, ರಾಮಾಯಣದ ಚಿತ್ರಗಳೆಂದು ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಮೂರನೆಯ ಅಧ್ಯಾಯದಲ್ಲಿ** : ಸಂತ ಶುಭರಾಯರು ರಚಿಸಿದ ವಿಷ್ಣುವಿನ ದಶವತಾರದ ವಿವಿದ ರೂಪಗಳಾದ ಶೇಷಶಾಹಿವಿಷ್ಣು, ಮತ್ಸಾವತಾರ, ಕೂರ್ಮಾವತಾರ, ವರಹಾವತಾರ ನರಸಿಂಹಾವತಾರ, ವಾಮನಾವತಾರ, ಪರುಶುರಾಮಾವತಾರ, ರಾಮನವತಾರ, ಕೃಷ್ಣಾವತಾರ, ಬುದ್ಧಾವತಾರ, ಕಲ್ಕಿ ಅವತಾರಗಳ ಚಿತ್ರಕಲಾಕೃತಿಗಳು ಶೈಲಿ, ಬಣ್ಣಗಳ ಬಳಕೆ, ಸಂಯೋಜನೆ, ಕಲಾಕೃತಿಗಳ ಪ್ರಮಾಣಗಳ ಹಾಗೂ ಅವುಗಳ ಮೇಲೆ ಬೀರಿದ ಪ್ರಭಾವ ಪ್ರೇರಣೆಗಳನ್ನು ಇಲ್ಲಿ ವಿವೇಚಿಸಲಾಗಿದೆ.



**ನಾಲ್ಕನೆಯ ಅಧ್ಯಾಯದಲ್ಲಿ** : ಸಂತ ಶುಭರಾಯರು ರಚಿಸಿದ ಧಾರ್ಮಿಕ ಮತ್ತು ಪೌರಾಣಿಕ ರಾಮಾಯಣ, ಮತ್ತು ಮಹಾಭಾರತಕ್ಕೆ ಸಂಬಂಧಿಸಿದ ಕಥಾಸನ್ನಿವೇಶಗಳನ್ನು ಆದರಿಸಿದ ಕಲಾಕೃತಿಗಳ ಕುರಿತು ಹಾಗೂ ಕಲಾಕೃತಿಗಳಲ್ಲಿ ಬಣ್ಣ, ಪ್ರಮಾಣ, ರೂಪ, ಲಾವಣ್ಯ, ಲಯ ಕಲಾಕೃತಿಗಳಲ್ಲಿ ಸಂಯೋಜನೆ ಹಾಗೂ ಕಲಾಕೃತಿಗಳಲ್ಲಿ ಕಂಡುಬರುವ ರಸಾನುಭವಗಳ ಕುರಿತು ಕಲಾಕೃತಿಗಳ ಛಾಯಚಿತ್ರಗಳ ಜೊತೆಗೆ ವಸ್ತುಕಥಾ ಸನ್ನಿವೇಶ ಕುರಿತು ವಿಷಯವನ್ನು ವಿವರಿಸಲಾಗಿದೆ.

**ಐದನೆಯ ಅಧ್ಯಾಯದಲ್ಲಿ** : ಶುಭರಾಯರ ಕಲಾಕೃತಿಗಳ. ಮೇಲಾದ ಪ್ರಭಾವ ಮತ್ತು ಪ್ರೇರಣೆಯ ಒಟ್ಟು ಲಕ್ಷಣಗಳ ಕುರಿತಾಗಿದೆ. ಇಲ್ಲಿ ಪ್ರಮುಖವಾಗಿ ಕಂಡುಬರುವ ಅವರ ಕಲಾಕೃತಿಗಳಲ್ಲಿ ಅವರದೇಯಾದ ವಿಶಿಷ್ಟ ಶೈಲಿಯನ್ನು ಕುರಿತು ಚರ್ಚಿಸಲಾಗಿದೆ. ಇವರು ಮೂಲತಹ ಕರ್ನಾಟಕದವರಾದ್ದರಿಂದ ಇಲ್ಲಿಯ ಪರಿಸರದ ಪ್ರಭಾವ ಇವರ ಕಲಾಕೃತಿಯಲ್ಲಿ ಮೂಡಿರುವುದನ್ನು ಗುರುತಿಸಿ ಅಧ್ಯಯನ ಮಾಡಲಾಗಿದೆ. ಆದರೆ ಇವರ ಕಲಾಕೃತಿಯಲ್ಲಿ ಯಾವುದೇ ರಾಜ್ಯದ ಅಂದರೆ ಮಹಾರಾಷ್ಟ್ರದ ಪ್ರಭಾವ ಮತ್ತು ಕರ್ನಾಟಕದ ಪ್ರಭಾವವು ಯಾವುದು ಕಂಡುಬರುವುದಿಲ್ಲ ಹಾಗಾಗಿ ಇವರ ಕಲಾಕೃತಿಗಳಲ್ಲಿ ಇವರದೇ ಯಾದ ಶೈಲಿಯು ಕಂಡುಬರುತ್ತದೆ ಇದರಲಿ ಪ್ರಮುಖವಾಗಿ ಇವರು ವಿಠಲನ ಭಕ್ತರಾಗಿರುವುದರಿಂದ ಚಿತ್ರ ಬಿಡಿಸುವುದರ ಮೂಲಕ ತಮ್ಮ ದೇವರನ್ನು ನಿತ್ಯಪೂಜಿಸುತ್ತಿದ್ದರು. ಅಲ್ಲದೆ ಇವರು ಹೆಚ್ಚಾಗಿ ಪೌರಾಣಿಕ ವಿಷಯಗಳಾದ ರಾಮಾಯಣ, ಮಹಾಭಾರತ, ವಿಷ್ಣುವಿನ ದಶಾವತಾರ, ಕೃಷ್ಣನ ವಿವಿಧ ಸನ್ನಿವೇಶ ಇನ್ನೂ ಮುಂತಾದ ವಸ್ತು ವಿಷಯಗಳನ್ನಾಧರಿಸಿ ರಚಿಸಿದ ಕಲಾಕೃತಿಗಳ ವಿವರಣೆಯನ್ನು ಇಲ್ಲಿ ಪ್ರಸ್ತುತ ಪಡಿಸಲಾಗಿದೆ.

**ಆರನೆಯ ಅಧ್ಯಾಯದಲ್ಲಿ** : ಸಂತ ಶುಭರಾಯರ ರಚಿಸಿದ ಸುಮಾರು ಎರಡು ನೂರು ವರ್ಷಕ್ಕೂ ಹಿಂದಿನ ಚಿತ್ರಕಲಾಕೃತಿಗಳ ಇಂದಿನ ಸ್ಥಿತಿ ಗತಿ ಕುರಿತು ಚರ್ಚಿಲಾಗಿದ್ದು ಈಗಲೂ ತಕ್ಕಮಟ್ಟಿಗೆ ಉತ್ತಮ ಸ್ಥಿತಿ ಇದ್ದೂ ಹಲವಾರು ಕಾರಣಗಳಿಂದ ನಿದಾನಗತಿಯಲ್ಲಿ ಅವನತಿಯತ್ತ ಸಾಗುತ್ತಿದ್ದು. ಹೀಗೆ ವಿವಿಧ ಆಪತ್ತಿಗೆ ಸಿಲುಕಿ ಹಾಳಾಗುತ್ತಿರುವ ಕಲಾಕೃತಿಗಳ ಕುರಿತು ಚರ್ಚಿಸಲಾಗಿದೆ. ಹಾಗೂ ಕಲಾಕೃತಿಗಳನ್ನು ಸುವ್ಯವಸ್ಥಿತವಾಗಿ ಕಾಪಾಡಿಕೊಂಡು ಹೋಗಲು ವೈಜ್ಞಾನಿಕ ವಿಧಾನಗಳ ಮೂಲಕ ಸಂರಕ್ಷಣೆಯನ್ನು ಕುರಿತು ವಿವರಣೆಯನ್ನು ನೀಡಲಾಗಿದೆ.

**ಏಳನೆಯ ಅಧ್ಯಾಯವು** ಸಮಾರೂಪವಾಗಿದ್ದು. ಈ ಅಧ್ಯಾಯದಲ್ಲಿ ಈ ಹಿಂದಿನ ಎಲ್ಲಾ ಅಧ್ಯಾಯಗಳ ಒಟ್ಟು ಅಧ್ಯಯನದ ಫಲಿತಗಳನ್ನು ಈಲ್ಲಿ ಸಮೀಕ್ಷಿಸಲಾಗಿದೆ.

**ಅಧ್ಯಯನದ ವೈಧಾನಿಕತೆ**

ಈ ಅಧ್ಯಯನಕ್ಕೆ ಎರಡು ರೀತಿಯ ವಿಧಾನವನ್ನು ಬಳಸಿಕೊಳ್ಳಲಾಗಿದೆ. ಅವು

೧. ಮೂಲ ಆಕರ ಸಾಮಗ್ರಿಗಳು

೨. ಆನುಷಂಗಿಕ ಆಕರ ಸಾಮಗ್ರಿಗಳು.



### ೧. ಮೂಲ ಆಕರ ಸಾಮಗ್ರಿಗಳು

ಮೂಲ ಆಕರ ಸಾಮಗ್ರಿಗಳಲ್ಲಿ ಕ್ಷೇತ್ರಕಾರ್ಯ ಅತಿ ಮುಖ್ಯವಾದ ಅಂಶವಾಗಿದ್ದು. ಅಧ್ಯಯನ ಕ್ರಮಕ್ಕೆ ಅಗತ್ಯವಾಗಿ ಬೇಕಾಗುವಂತಹದು. ಒಂದು ನಾಡಿನ ಸಂಸ್ಕೃತಿ, ಇತಿಹಾಸ, ಕಲೆ ವಿಷಯಗಳ ಬಗ್ಗೆ ಸಂಶೋಧನೆ ಸುಲಭ ಮಾರ್ಗವಾಗಿದೆ. ಈ ಅಧ್ಯಯನಕ್ಕೆ ಮೂಲ ಆಕರ ಸಾಮಗ್ರಿಯಾಗಿ ಮೂಲ ಚಿತ್ರಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಕ್ಷೇತ್ರಕಾರ್ಯದಲ್ಲಿ ಅವಲೋಕನ ಅತಿ ಮುಖ್ಯವಾದ ಅಂಶವಾಗಿದ್ದು ಮೂಲ ಭಿತ್ತಿಚಿತ್ರಗಳು ಇರುವ ಕಡೆಗೆ ಅನೇಕ ಭಾರಿ ಬೇಟಿಕೊಟ್ಟು ಚಿತ್ರಗಳನ್ನು ಸೂಕ್ಷ್ಮವಾಗಿ ಗಮನಿಸಿ ಛಾಯಾಚಿತ್ರಣ ಮಾಡಿಕೊಂಡು ಅದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಅದೇ ಸ್ಥಳದಲ್ಲಿ ಬರೆದುಕೊಳ್ಳಲಾಯಿತು. ಅಲ್ಲದೇ ಚಿತ್ರಗಳಿದ್ದ ಮಠದಲ್ಲಿ ಕೆಲವು ಕಾರ್ಯಕರ್ತರಿಂದ, ಸ್ಥಳೀಯ ಹಿರಿಯರನ್ನು ಕೇಳಿ ಮಾಹಿತಿ ಪಡೆದುಕೊಳ್ಳಲಾಗಿದೆ. ಮೂಲ ಚಿತ್ರಗಳು ಲಭ್ಯವಿಲ್ಲದ ಸಮಯದಲ್ಲಿ ಅವುಗಳನ್ನು ಪ್ರತಿ ಮಾಡಿಟ್ಟುಕೊಂಡು ಅಥವ ಛಾಯಚಿತ್ರ ಮಾಡಿ ಕೊಳ್ಳಲಾಗಿದೆ. ಮತ್ತು ವಸ್ತು ಸಂಗ್ರಹಾಲಯಗಳಿಗೆ ಬೇಟಿಕೊಟ್ಟು ವಿಷಯ ಸಂಗ್ರಹ ಮಾಡಿಕೊಳ್ಳಲಾಗಿದೆ. ಅಲ್ಲದೇ ಈ ಕೇತ್ರಕಾರ್ಯದಲ್ಲಿ ಹಲವಾರು ವಿದ್ವಾಂಸರ ಜೊತೆಗೆ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಹೀಗೆ ಕ್ಷೇತ್ರಕಾರ್ಯದಿಂದ ದೊರೆತ ವಿವರಗಳನ್ನು ಅಭ್ಯಾಸಕ್ಕೆ, ಬರವಣಿಗೆಗೆ, ಅನುಕೂಲವಾಗುವಂತೆ ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು ಪ್ರಸ್ತುತ ಪ್ರಬಂಧವನ್ನು ರಚಿಸಲಾಗಿದೆ.

### ೨. ಆನುಷಂಗಿಕ ಆಕರ ಸಾಮಗ್ರಿ

ಪ್ರಬಂಧ ರಚಿಸುವಲ್ಲಿ ಎರಡನೇ ವಿಧಾನ ಆನುಷಂಗಿಕ ಆಕರ ಸಾಮಗ್ರಿಯಾಗಿದ್ದು, ಇದರಲ್ಲಿ ಪ್ರಕಟಿತ ಸಾಹಿತ್ಯ ಕೃತಿಗಳು, ಸಂಪುಟಗಳು, ಅಭಿನಂದನಾ ಗ್ರಂಥಗಳು, ವಿಶ್ವಕೋಶಗಳು, ಅನುವಾದ ಗ್ರಂಥಗಳು,ಸಂಶೋಧನಾ ಮಹಾಪ್ರಬಂಧಗಳು, ಪ್ರವಾಸಿಗರ ಬರಹಗಳು. ಸಂಶೋಧನಾ ಲೇಖನಗಳು, ಪತ್ರಗಳು, ಸಂಪಾದನಾ ಗ್ರಂಥ ಮುಂತಾದವುಗಳನ್ನು ಆನುಷಂಗಿಕ ಆಕರ ಸಾಮಗ್ರಿಗಳಾಗಿ ಬಳಸಿಕೊಳ್ಳಲಾಗಿದೆ. ಹಾಗೆಯೇ ಬೇರೆ ಬೇರೆ ಸ್ಥಳಗಳಲ್ಲಿನ ಗ್ರಂಥಾಲಯಗಳಿಗೆ ಭೇಟಿ ನೀಡಿ ಅಧ್ಯಯನಮಾಡಲಾಗಿದೆ.

ಹೀಗೆ ಅನುಷಂಗಿಕ ಆಕರಗಳನ್ನು ವಿವಿಧ ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು ಪ್ರಸ್ತುತ ಕಿರು ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

* * *



ಅಧ್ಯಾಯ : ಎರಡು

# ಸಂತ ಶುಭರಾಯರ ಜೀವನ ಮತ್ತು ಚಾರಿತ್ರಿಕ ಹಿನ್ನೆಲೆ

ನೀತಿ, ನಿಷ್ಠೆ, ಶ್ರದ್ದೆ, ಸ್ವಾಭಿಮಾನ, ಪ್ರಾಮಾಣಿಕತೆ ಇರುವ ಮನುಷ್ಯನನ್ನು ಯಾವುದು ತಡೆದು ನಿಲ್ಲಸಲಾರದು. ನಿಸ್ವಾರ್ಥದಿಂದ ಪ್ರಯತ್ನಶಿಲನಾದವನಿಗೆ ಮಹತ್ತರವಾದುದನ್ನು ಪಡೆಯಲು ದೇವರ ದೈವೀ ಅನುಗ್ರಹ ದೊರೆಯುತ್ತದೆ. ಎಂಬ ಮಾತಿದೆ ಆ ದೈವ ಸಂಕಲ್ಪ ಸಾಧನೆಯಿಂದ ನಾಡು ನೆನಪಿಸುವ ಮಹತ್ತರವಾದ ಸಾಧನೆಯನ್ನು ಮಾಡಿ ತಮ್ಮ ಜೀವನವನ್ನು ಸಾರ್ಥಕ ಮಾಡಿಕೊಂಡ ಅನೇಕ ಮಹನೀಯರು ನಮ್ಮ ನಾಡಿನಲ್ಲಿ ಆಗಿ ಹೋಗಿದ್ದಾರೆ. ಅವರಲ್ಲಿ ಕನ್ನಡಿಗ, ರಾಜಕಾರಣಿ, ಚಿತ್ರಕಾರ, ಕವಿ, ಸಂಗೀತಗಾರ, ನೃತ್ಯಗಾರ ಎಲ್ಲಕ್ಕೂ ಮಿಕ್ಕಿ, ಸಂತ, ಭಕ್ತನಾಗಿ ಇಂದಿನ ಮಹಾರಾಷ್ಟ್ರದ ಸೊಲ್ಲಾಪುರದಲ್ಲಿ ನೆಲೆನಿಂತು ತನ್ನ ಸಾಧನೆಯಿಂದ ಜನಮಾನಸದಲ್ಲಿ ಇಂದಿಗೂ ಪೂಜ್ಯತೆಯ ಸ್ಥಾನವನ್ನು ಪಡೆದ ಸಾಧಕ. ಸಂತ ಚಿತ್ರಕಾರ ಶುಭರಾಯರು ಒಬ್ಬರು.

**ಬಾಲ್ಯ-ಪರಿಸರ :**

ಶುಭರಾಯರು ಹುಟ್ಟಿದ್ದು ಕರ್ನಾಟಕದಲ್ಲಿ ಮೈಸೂರಿನ ಸಮೀಪವಿರುವ ಕೋಲಾರ ಜಿಲ್ಲೆಯ ಒಂದು ಸಣ್ಣಹಳ್ಳಿ ಮಾಲೂರಿನಲ್ಲಿ ವೈಧಿಕ ಬ್ರಾಹ್ಮಣರ ಮನೆತನದಲ್ಲಿ ಇವರು ಜನಿಸಿದ್ದಾರೆ. ೧೭೫೦ರಲ್ಲಿ ತೆಲುಗು ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ಶುಭರಾಯರಿಗೆ ಇಬ್ಬರು ಅಣ್ಣತಮ್ಮಂದಿರಿದ್ದರು. ಅಣ್ಣ ಶಂಕರರಾವ್, ತಮ್ಮ ಬೊಂಡಪ್ಪ. ಇವರ ತಂದೆ ತಾಯಿಯರ ಹೆಸರು ಗೊತ್ತಾಗಿಲ್ಲ. ಆದರೆ ಇವರು ಸುಬ್ಬಮ್ಮ ಎಂಬವರೊಂದಿಗೆ ಮದುವೆಯಾಗಿದ್ದಾಗಿಯೂ, ಅವರು ಸುಖಿ ಸಂಸಾರವನ್ನು ಹೊಂದಿದ್ದುದಾಗಿ ತಿಳಿದುಬರುತ್ತದೆ. ಇಷ್ಟು ಅವರ ಕುಟುಂಬಕ್ಕೆ ಸಂಬಂಧಿಸಿದ ಮಾಹಿತಿಗಳು ಮಾತ್ರ ಲಭ್ಯವಾಗಿವೆ.

ಶುಭರಾಯರದು ಸುಸಂಸ್ಕೃತ ಬ್ರಾಹ್ಮಣ ಮನೆತನದ ಪರಿಸರವಾಗಿದ್ದು ವಿವಿಧ ಭಾಷೆ ಪ್ರಾಚೀನ ವೇಧ, ಆಗಮಗಳ ಅಧ್ಯಯನಮಾಡುವ ವಾತಾವರಣವು ಅವರಿಗೆ ಕುಟುಂಬದಲ್ಲಿಯೇ ತಂದೆ ತಾಯಿಯಿಂದ ಬಂದು ಉತ್ತಮ ಸಂಸ್ಕಾರವನ್ನು ಹೊಂದಿದ್ದರು. ಆಕಾರಣಕ್ಕಾಗಿ ಅವರು ಉನ್ನತ ಹುದ್ದೆಯನ್ನು ಹೊಂದಿದ್ದುದು

ಕಂಡುಬರುತ್ತದೆ. ಮುಂದೆ ಅವರೊಬ್ಬ ಶ್ರೇಷ್ಠ ಕವಿಯಾಗಿ ಅನೇಕ ಕಾವ್ಯಗಳನ್ನು ರಚಿಸಿದ್ದು ಮರಾಠಿಯಲ್ಲಿ ಅವು ತುಂಬಾ ಪ್ರಸಿದ್ಧಿಯನ್ನು ಪಡೆದಿವೆ. ಹೆಚ್ಚಿನ ವಿವರಗಳು ಶುಭರಾಯರ ಬಗೆಗೆ ಉಪಲಬ್ಧವಾಗಿಲ್ಲ. ಅವರ ವಂಶಜರು ಇಂದು ಅವರ ಹುಟ್ಟೂರಿನಲ್ಲಿ ಇಲ್ಲ. ಹೀಗಾಗಿ ಅವರ ಪೂರ್ಣವಿವರಗಳ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನವಾಗಬೇಕಾಗಿದೆ.

**ಸುಬ್ಬರಾಯ್–ಶುಭರಾಯ :**

ಶುಭರಾಯರ ಮೂಲ ಹೆಸರು ಸುಬ್ಬರಾಯ್ ಎಂದಿದ್ದು ಮುಂದೆ ಅವರು ಸೊಲ್ಲಾಪುರಕೆ ಬಂದ ಮೇಲ ಅವರ ಹೆಸರು ಶುಭರಾಯವಾಗಿದೆಯಂದು ಹೇಳಲು ಆಧಾರಗಳಿವೆ. ಕಬಿರಕಾಸರ್ ಎಂಬುವವರು ತಮ್ಮ ಗ್ರಂಥ 'ಸೀಕ್ರೇಟ್ ಕರೆಸ್ಪಾಂಡನ್ಸ್ ಆಫ್ ಟಿಪ್ಪುಸುಲ್ತಾನ'ನಲ್ಲಿ ಕೃಷ್ಣರಾವ್, ಶಿವಾಜಿ ಇತ್ಯಾದಿ ಓಂದು ಅಧಿಕಾರಿಗಳು ಟಿಪ್ಪುವಿನ ಜೊತೆ ಇದ್ದುದಾಗಿ ತಿಳಿಸುತ್ತ 'ಸುಬ್ಬರಾವ್' ಎಂಬ ಹೆಸರಿನ ವ್ಯಕ್ತಿ ಇರುವ ವಿಷಯವನ್ನು ಪ್ರಸ್ತಾಪಿಸುತ್ತಾರೆ. ಈ ಸುಬ್ಬರಾವ್ ಅವರೇ ಮಹಾರಾಷ್ಟ್ರದ ಸೊಲ್ಲಾಪುರಕ್ಕೆ ಬಂದ ಮೇಲೆ ಶುಭರಾಯ ಎಂದು ಕರೆಸಿಕೊಂಡಿರಬೇಕು.

**ಬಹುಭಾಷಾ ಪಂಡಿತ :**

ಶುಭರಾಯರು ಕರ್ನಾಟಕದಲ್ಲಿ ತೆಲುಗು ಮಾತನಾಡುವ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದವರು. ಆಗಿನ ಸಂಪ್ರದಾಯದಂತೆ ಅವರು ವೇದಗಳನ್ನು ಚನ್ನಾಗಿ ಅಧ್ಯಯನ ಮಾಡಿದ್ದರು. ಸೂಕ್ತ ವಿದ್ಯಾಭ್ಯಾಸದ ಬಳಿಕ ಶುಭರಾಯರು ತಮ್ಮ ಯೌವನಾವಸ್ಥೆಯಲ್ಲಿ ಮೈಸೂರಿನ ಹುಲಿ ಟಿಪ್ಪುಸುಲ್ತಾನನ ದರ್ಬಾರು ಸೇರಿದವರು. ಅದ್ಭುತ ಪ್ರತಿಭಾ ಸಂಪನ್ನರಾಗಿದ್ದ ಶುಭರಾಯರು ಅಲ್ಪಾವಧಿಯಲ್ಲೇ ಟಿಪ್ಪುಸುಲ್ತಾನನ ಆಸ್ಥಾನದಲ್ಲಿ ಅತ್ಯುನ್ನತ ಪದವಿಯಾಗಿದ್ದ ಉಪಪ್ರಧಾನಮಂತ್ರಿ ಪಟ್ಟವನ್ನು ಅಲಂಕರಿಸಿದರು. ಹೀಗಾಗಿ ಶುಭರಾಯರು ಕರ್ನಾಟಕದವರಾದರು ಸಂಸ್ಕೃತ, ತೆಲುಗು ಮತ್ತು ತಮಿಳು ಭಾಷೆಗಳಲ್ಲದೆ ಕನ್ನಡ, ಉರ್ದು, ಪಾರ್ಸಿ ಭಾಷೆಗಳನ್ನು ಅವರು ಬಲ್ಲವರಾಗಿದ್ದರು.

**ಕರ್ನಾಟಕ ಬಿಟ್ಟು ಸೊಲ್ಲಾಪುರಕ್ಕೆ ಪ್ರಯಾಣ :**

ಟಿಪ್ಪು ದರ್ಬಾರಿನಲ್ಲಿ ಸಂಭವಿಸಿದ ಒಂದು ಘಟನೆಯಿಂದ ಶುಭರಾಯರು ತಮ್ಮ ಹುದ್ದೆ ಹಾಗೂ ಸುಲ್ತಾನನ ರಾಜ್ಯವನ್ನೇ ತೊರೆದು ಸೊಲ್ಲಾಪುರಕ್ಕೆ ಆಗಮಿಸಿದರು.[೧] ಶ್ರೀರಂಗ ಪಟ್ಟಣದ ಕೊನೆಯ ಯುದ್ಧದಲ್ಲಿ ಟಿಪ್ಪುವಿನ ಪತನದ ಬಳಿಕ ಶುಭರಾಯರು ಕರ್ನಾಟಕವನ್ನು ತ್ಯಜಿಸಿದರೋ ಅಥವಾ ಅದಕ್ಕೂ ಮೊದಲೆ ತ್ಯಜಿಸಿದರೋ ಎಂಬುದು ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಅವರಲ್ಲಿ ಹುದುಗಿದ್ದ ಅಧ್ಯಾತ್ಮಿಕದಾಹವೇ ಅವರನ್ನು ಮನೆಯಿಂದ ಹೊರಗೆಳೆದಿರಬೇಕು. ಶುಭರಾಯರು ಟಿಪ್ಪುವಿನ ರಾಜ್ಯವನ್ನು ತ್ಯಜಿಸಿ ಹೋಗಲು ಕಾರಣವಾದ ಒಂದು ಘಟನೆ ಮರಾಠಿ ಸಾಹಿತ್ಯದಲ್ಲಿ ಉಲ್ಲೇಖಿಸಲಾಗಿದೆ.

---

೧. ಪಿ.ಆರ್. ತಿಪ್ಪೇಸ್ವಾಮಿ.: ಸಂತ, ಕಲಾವಿದ ಶುಭರಾಯರು, ಪುಟ ೧ ಕರ್ನಾಟಕ ಲಲಿತ ಕಲಾಅಕಾಡೆಮಿ.ಬೆಂಗಳೂರು. ೧೯೯೩

ಟಿಪ್ಪುವಿನ ದರಬಾರಿಗೆ ಒಮ್ಮೆ ಹಿರಿಯ ಖಾಜಿಯೊಬ್ಬ ಬಂದಿರುತ್ತಾನೆ ಆತ ಟಿಪ್ಪುವಿಗೆ ಒಂದು ಉಪದೇಶ ಮಾಡುತ್ತಾನೆ ಪೈಗಂಬರನ ಸನ್ನಿಧಿಗೆ ಸೇರಬೇಕೆಂಬ ಇಚ್ಛೆ ಇದ್ದರೆ ತಮ್ಮ ಮುಂಗೈಗೆ ಎಣ್ಣೆ ಅಥವಾ ತುಪ್ಪ ಸವರಿಕೊಂಡು ಎಳ್ಳಿನ ರಾಶಿಯಲ್ಲಿ ಆ ಕೈಯನ್ನು ತುರುಕಿ ತಗೆಯಬೇಕು ಹೀಗೆ ಕೈ ತಗೆದಾಗ ಎಷ್ಟು ಎಳ್ಳು ಹತ್ತಿರುತ್ತದೋ ಅಷ್ಟು ಬ್ರಾಹ್ಮಣರನ್ನು ಮುಸಲ್ಮಾನರನ್ನಾಗಿ ಪರಿವರ್ತಿಸಬೇಕೆಂಬುದು ಖಾಜಿಯ ಉಪದೇಶ. ಶುಭರಾಯರು ಯಾವತ್ತು ಟಿಪ್ಪುವಿನ ಬಳಿ ಇರುತ್ತಿದ್ದುದರಿಂದ ಈ ಉಪದೇಶ ಇವರ ಕಿವಿಗೆ ಬಿದ್ದು ತೀವ್ರ ಗೊಂದಲಕ್ಕೊಳಗಾಗುತ್ತಾರೆ. ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ಎಂಬ ಭಗವಂತನ ವಾಣಿ ನೆನಪಾಗುತ್ತದೆ. ಇನ್ನು ಇಲ್ಲಿರುವುದು ಯೋಗ್ಯವಲ್ಲ ಎಂದು ಪರಿಗಣಿಸಿ ಮನೆಮಠ ತ್ಯಜಿಸುತ್ತಾರೆ. ಅವರು ಊರೂರು ಸಂಚರಿಸಿ ಅಲೆಯುತ್ತ ಬಂದುದು ಕರ್ನಾಟಕದ ಗಡಿ ಪ್ರದೇಶ ಸೊಲ್ಲಾಪುರಕ್ಕೆ ಬಂದು ನೆಲೆಸುತ್ತಾರೆ.

ಆದರೆ ಇನ್ನೊಂದು ಘಟನೆಯನ್ನು ಬಿ.ಡಿ. ತಿವಾರಿಯವರು ತಮ್ಮ ಲೇಖನದಲ್ಲಿ ಹೀಗೆ ಪ್ರಸ್ತಾಪಿಸಿದ್ದಾರೆ. ಅವರು ಸಮಕಾಲೀನ ಐತಿಹಾಸಿಕ ಹಾಗೂ ಮಿಲಿಟರಿ ದಾಖಲೆಗಳ ಪ್ರಕಾರ ಶುಭರಾಯರು ಟಿಪ್ಪುವಿನ ಉಪಪ್ರಧಾನಿಯಾಗಿರಲಿಲ್ಲ ಬದಲಾಗಿ ಅವರು ಪ್ರಧಾನ ಪೇಷ್ಕಾರ್ ಆಗಿದ್ದರು. ಎಂದು ಹೇಳುತ್ತಾ ೧೭೯೨ರಲ್ಲಿ ಟಿಪ್ಪೂಸುಲ್ತಾನ್ ಕಾರ್ನ್‌ವಾಲಿಸ್‌ನ ಎದುರು ಅನುಭವಿಸಿದ ಸೋಲು ಶುಭರಾಯರ ಜೀವನದಲ್ಲೊಂದು ಮುಖ್ಯ ಹಂತ. ಅಂದಿನ ಸಂಸ್ಥಾನದ ಪ್ರಧಾನ ಪೇಷ್ಕರ್(ವಕೀಲ) ಆಗಿದ್ದರು ಅವರು ಸಲ್ಲಿಸಿದ ಸಂಸ್ಥಾನದ ವಿವಿಧ ಭಾಗಗಳು ಕಂದಾಯ ವಿವರಗಳು ಆಕ್ರಮ ಹಾಗು ಅಸತ್ಯದಿಂದ ಕೂಡಿದ್ದು ಆದುದರಿಂದ ಅವು ಕೆನಾವೆಗೆ ಒಪ್ಪಿಗೆಯಾಗಲಿಲ್ಲ. ಇತ್ತ ಸುಲ್ತಾನನ ಕೋಪಕ್ಕೆ ತುತ್ತಾಗುವ ಭಯದಿಂದ ಸತ್ಯ ಸಂಗತಿಗಳನ್ನೂ ಮರೆಮಾಚಿದ್ದ ಸುಬ್ಬರಾಯರು ಅತ್ತ ತಾವು ತಯಾರಿಸಿದ್ದ ದಾಖಲೆಗಳಿಂದ ಕೆನಾವೆಯನ್ನೂ ನಂಬಿಸಲಾಗಲಿಲ್ಲ. ಸತ್ಯ ಸಂಗತಿಗಳನ್ನೊಳಗೊಂಡ ದಾಖಲೆಗಳನ್ನು ಕೆನಾವೆಗೆ ಸಲ್ಲಿಸಿದ್ದರೆ, ಅವರು ಸುಲ್ತಾನನ ಕೋಪಕ್ಕೆ, ಶಿಕ್ಷೆಗೆ ತುತ್ತಾಗುವ ಭಯವಿತ್ತು. ಈಗಾಗಲೇ ತಾವೇ ಕೆನಾವೆಗೆ ಸಲ್ಲಿಸಿದ್ದ ಸುಳ್ಳು ವಿವರಗಳಿಂದಾಗಿ ಸರ್ಕಾರ ಅವರ ವಿರುದ್ಧ ದಸ್ತಗಿರಿ, ಶಿಕ್ಷೆ, ಚಿತ್ರಹಿಂಸೆಗಳಂಥ ಮಿಲಿಟರಿ ಕ್ರಮ ಜರುಗಿಸುವ ಸಾಧ್ಯತೆ ಇತ್ತು ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಶ್ರೀರಂಗಪಟ್ಟಣವನ್ನು ತೊರೆದು ಬೇರೊಂದು ಕಡೆ ತಲೆತಪ್ಪಿಸಿಕೊಂಡು ಓಡಿಹೋಗುವುದನ್ನು ಬಿಟ್ಟರೆ ಶುಭರಾಯರಿಗೆ ಅನ್ಯಮಾರ್ಗವೇ ಇರಲಿಲ್ಲ.

ಮೇಲೆ ಕಾಣಿಸಿದ ಇತಿಹಾಸಿಕ ಸತ್ಯಗಳಿಂದ ಸಾಬೀತಾಗುವ ಸಂಗತಿ ಇದು. ಶ್ರೀ ಶುಭರಾಯರು ಒಬ್ಬ ಖಾಜಿ ಹಾಗೂ ಟಿಪ್ಪುಸುಲ್ತಾನನಿಮದ ಬಲವಂತವಾಗಿ ಇಸ್ಲಾಂಧರ್ಮವನ್ನು ಸ್ವೀಕರಿಸಬೇಕಾಯಿತು. ಎಂಬುದು ಸಂಪೂರ್ಣವಾಗಿ ನಿರಾಧಾರ ಮಾತ್ರವಲ್ಲ. ಇಸ್ಲಾಮ ಧರ್ಮ ಹಾಗೂ ಸುಲ್ತಾನನ ವಿರುದ್ಧ ನಡೆಸಿದ ಅಪಪ್ರಚಾರ ಕೂಡ ಹೌದು[೩] ಎಂಬುದಾಗಿ ಹೇಳಿರುವ ಅಂಶಗಳು ಸತ್ಯಕ್ಕೆ ಸಮೀಪವೆನಿಸುತ್ತವೆ. ಇನ್ನೂ ಈ ವಿಷಯ ಕುರಿತು ಹೆಚ್ಚಿನ ಅಧ್ಯಯನವಾಗಬೇಕಾಗಿದೆ.

---

೨. ಅ.ಲ. ನರಸಿಂಹನ್ (ಸಂ) : ಸಂತಕಲಾವಿದ ಶುಭರಾಯರು ಪು. ೨೮

೩. ಅ.ಲ. ನರಸಿಂಹನ್ (ಸಂ) : ಸಂತಕಲಾವಿದ ಶುಭರಾಯರು ಪು. ೨೮

ಶ್ರೀ ಶುಭರಾಯರದು ಆತ್ಮಜ್ಞಾನದ ಬೆಳಕು ಕಂಡ ಜೀವ. ಅವರು ೧೪೭ ಆಧ್ಯಾತ್ಮಿಕ ಪದಗಳನ್ನೂ ಮರಾಠೀ ಸಾಹಿತ್ಯಕ್ಕೂ ೨೫೦ಕ್ಕೂ ಹೆಚ್ಚು ಚಿತ್ರಗಳನ್ನು ಭಾರತೀಯ ಕಲಾ ಪ್ರಪಂಚಕ್ಕೂ ಬಳುವಳಿಯಾಗಿ ನೀಡಿ ತಮ್ಮ ನೆನಪಿನೊಂದಿಗೇ ಬಿಟ್ಟು ಹೋಗಿದ್ದಾರೆ. ಅವರು ಕೊನೆಯುಸಿರೆಳೆದದ್ದು ೧೮೨೦ರಲ್ಲಿ. ತಾವು ಕಟ್ಟಿದ ಮಠದ ಆವರಣದಲ್ಲಿಯೇ ಅವರ ಸಮಾಧಿಯನ್ನೂ ನಿರ್ಮಿಸಿಲಾಗಿದೆ.

ಶ್ರೀ ಶುಭರಾಯರ ರಚನೆಗಳ ಒಂದು ವಿಶೇಷ ಗುಣವೆಂದರೆ ಅವರು ತಾವು ಬರೆದ ೧೪೭ಪದಗಳಲ್ಲೇ ಭಾರತೀಯ ಸಂಗೀತದ ೬೪ರಾಷ್ಟ್ರಗಳನ್ನು ರಾಗಿಣಿಗಳನ್ನೂ ಬಳಸಿದ್ದಾರೆ ಎನ್ನುವುದು. ಹೀಗೆ ಸಂಗೀತಗಾರನೊಬ್ಬ ತನ್ನ ಕಳಿಎಲವೇ ಕೆಲವು ರಚನೆಗಳಲ್ಲಿ ಇಷ್ಟೊಂದು ರಾಗ-ರಾಗಿಣಿಗಳನ್ನು ಬಳಸಿಕೊಂಡ ನಿದರ್ಶನ ಬೇರೆ ಯಾವುದೇ ಭಾರತೀಯ ಭಾಷೆಯಲ್ಲ, ಜಗತ್ತಿನ ಯಾವ ಭಾಷೆಯತಲ್ಲೂ ಇಲ್ಲ. ಅವರ ಈ ಪದಗಳು ರಚನೆಕಾರರ ಆಧ್ಯಾತ್ಮಿಕ ಅನುಭವ ಹಾಗೂ ಅವರ ಭಕ್ತಿಭಾವದಿಂದ ಮೂಡಿಬಂದಿದೆ.

ಸೊಲ್ಲಾಪುರವು ಅವರಿಗೆ ಸ್ಫೂರ್ತಿಯ ತಾಣವಾಯಿತು. ಅವರು ೧೮೨೦ ರಲ್ಲಿ ಸ್ವರ್ಗಸ್ಥರಾಗುವವರೆಗೂ ಸೊಲ್ಲಾಪುರದಲ್ಲೇ ನೆಲೆಸಿದರು. ಶುಭರಾಯರು ಸೊಲ್ಲಾಪುರಕ್ಕೆ ಆಗಮಿಸುವ ಕಾಲಕ್ಕೆ ಪೇಶ್ವೆಗಳ ಆಡಳಿತ ತನ್ನ ಕೊನೆಯ ದಿನಗಳನ್ನು ಎಣಿಸುತ್ತಿತ್ತು. 'ಕ್ರಾಂತಿನಗರ' ವೆಂದು ಹೇಳಲಾಗುವ ಸೊಲ್ಲಾಪುರವನ್ನು ಶುಭರಾಯರು ಸಮಾಧಿ ಹೊಂದುವುದಕ್ಕೆ ಎರಡು ವರ್ಷಮೊದಲು ಬ್ರಿಟಿಷರು ತಮ್ಮ ವಶಕ್ಕೆ ತಗೆದುಕೊಂಡರು. ಟಿಪ್ಪುಸುಲ್ತಾನನ ಆಸ್ಥಾನದಲ್ಲಿ ಉಪ ಪ್ರಧಾನಮಂತ್ರಿಯಂಥ ಉನ್ನತ ಹುದ್ದೆಯನ್ನು ಅಲಂಕರಿಸಿದ್ದ ಶುಭರಾಯರು ಸೊಲ್ಲಾಪುರವನ್ನು ಒಬ್ಬ ಸರಳ ಸನ್ಯಾಸಿಯಾಗಿ ಪ್ರವೇಶಿಸಿದರು. ಅವರಲ್ಲಿ ಉಂಟಾದ ಈ ದಿಢೀರ್ ಬದಲಾವಣೆಗೆ ಅವರ ಶುಭರಾಯರು ಕೇವಲ ಕಷಾಯಧಾರಿ ಸನ್ಯಾಸಿಯಾಗಿದ್ದವರಲ್ಲ. ಅವರು ನಿಜವಾದ ಅರ್ಥದಲ್ಲಿ ಸನ್ಯಾಸಿಯಾಗಿದ್ದರು. ಅಧ್ಯಾತ್ಮಿಕ ಪರಮಾನಂದವನ್ನು ಅವರು ಗಳಿಸಿದರು. ಬಾಹ್ಯ ಆಡಂಬರಗಳಲ್ಲಿ ಅವರಿಗೆ ಎಳ್ಳಷ್ಟೂ ನಂಬಿಕೆ ಇರಲಿಲ್ಲ. ಇಂತಹ ಆಧ್ಯಾತ್ಮಿಕ ಪರಮಾನಂದವನ್ನು ಪಡೆಯಲು ಕಲೆಯೊಂದೇ ಪ್ರಮುಖ ಅಸ್ತ್ರಯಂದು ಅವರು ದೃಢವಾಗಿ ನಂಬಿದರು. ಇಂತಹ ಹಲವಾರು ವಿಚಾರಗಳ ಹಿನ್ನೆಲೆಯಲ್ಲಿ ಕಲೆಯನ್ನೇ ನಂಬಿಕೊಂಡು ಕಲೆಯನ್ನು ಬೆಳೆಸುವುದರೊಂದಿಗೆ ತಮ್ಮ ಇಷ್ಟ ದೇವರನ್ನು ಪೂಜಿಸುತ್ತಾ ಕಾಲಕಳೆಯುವ ಕಲಾವಿದನಾಗಿ ರೂಪಗೊಂಡರು. ಹಾಗೇ ಇವರು ರಚಿಸಿದ ಕಲಾಕೃತಿಗಳು ಹೆಚ್ಚಾಗಿ ಪೌರಾಣಿಕ ವಿಷಯಗಳನ್ನಾಧರಿಸಿದ ಚಿತ್ರಗಳೆಯಾಗಿವೆ. ಮತ್ತು ಕಲಾಕೃತಿಯಲ್ಲಿ ಆಧ್ಯಾತ್ಮಿಕ ಅಂಶಗಳನ್ನೊಳಗೊಂಡ ಚಿತ್ರಗಳನ್ನು ರಚಿಸುವುದರೊಂದಿಗೆ ಅವರು ಅಧ್ಯಾತ್ಮಿಕ ಜೀವನ ನಡೆಸುತ್ತಿದ್ದರು.

ಒಂದು ರಾಜ್ಯದಿಂದ ಬೇರೆ ರಾಜ್ಯಕ್ಕೆ ವಲಸೆ ಹೋಗಿ ತಮ್ಮ ಮಾತೃಭಾಯಲ್ಲದ ಅನ್ಯಭಾಷೆಯಲ್ಲಿ ಕಾವ್ಯ ರಚನೆಮಾಡಿ, ರಾಷ್ಟೀಯ ಐಕಮತ್ಯಕ್ಕೆ ತಮ್ಮ ಕಾಣಿಕೆಯನ್ನು ನೀಡಿರುವ ಸಂತರ ಸಾಲಿನಲ್ಲಿ ಮಹಾರಾಷ್ಟ್ರ ನಾಮದೇವರೊಂದಿಗೆ ನಿಲ್ಲಬಲ್ಲಂಥವರು ಶ್ರೀ ಶುಭರಾಯರು. ನಾಮದೇವರ ಮಾತೃಭಾಷೆ ಮರಾಠಿ. ಅವರು ಮಹಾರಾಷ್ಟ್ರದಿಂದ ಉತ್ತರಕ್ಕೆ ಹೋಗಿ ಹಿಂದಿಯಲ್ಲಿ ಪದ್ಯರಚನೆ ಮಾಡಿದರು. ಅವರ

೪. ಪಿ.ಆರ್. ತಿಪ್ಪೇಸ್ವಾಮಿ.: ಸಂತ, ಕಲಾವಿದ ಶುಭರಾಯರು, ಪುಟ. ೧

೫. ಪಿ.ಆರ್. ತಿಪ್ಪೇಸ್ವಾಮಿ.: ಸಂತ, ಕಲಾವಿದ ಶುಭರಾಯರು, ಪುಟ. ೨

ಕೆಲವು ಗೀತೆಗಳು ಪಠನೆಯ ಪೂಜ್ಯ ಗಿತೆಗಲಾಗಿ ಗುರುಗ್ರಂಥ ಸಾಹಿಬ್‌ನಲ್ಲಿ ಸೇರ್ಪಡೆಯಾಗಿವೆ. ಅದೇ ರೀತಿ ಶುಭರಾಯರ ಮಾತೃಭಾಷೆ ತೆಲುಗು. ಅವರೂ ಕೂಡ ಕರ್ನಾಟಕದ ಉತ್ತರಕ್ಕೆ ವಲಸೆ ಹೋಗಿ ಮರಾಠಿಯಲ್ಲಿ ಕಾವ್ಯರಚನೆ ಮಾಡಿದರು. ಅವರ ಹಾಡುಗಲನನೂ ಮಹಾರಾಷ್ಟ್ರದ ಅನೇಕ ಕಡೆ ಜೀವನಕಾರರು ಬಳಸಿಕೊಳ್ಳುತ್ತಾರೆ.

ಸಂತ ಶುಭರಾಯರು ಸೊಲ್ಲಾಪುರದಲ್ಲಿ ದತ್ತುಚೌಕು ಎಂಬಲ್ಲಿ 'ಶುಭರಾಯ ಮಠ' ವೆಂಬ ಚಿಕ್ಕ ಮಠವಿದೆ. ವಿಠಲ ಆ ಮಠದಲ್ಲಿ ಸ್ಥಾಪಿತವಾದ ದೇವ. ಗದ್ದುಗೆಯ ಮೇಲೆ ನಿಂತಿರುವ ವಿಠಲನ ಉತ್ಸವ ಸಂದರ್ಭಗಳಲ್ಲೆಲ್ಲ ಆ ವಿಠಲ ಭಕ್ತ ಗದ್ದುಗೆಯ ಸುತ್ತಲಿರುವ ಮಂಟಪವನ್ನು ಚಿತ್ರಗಳಿಂದ ಅಲಂಕರಿಸುತ್ತಿದ್ದ ಇಂತಹ ಚಿತ್ರಗಳಿಂದಲೇ ಈ ಮಹಾನ್ ಕಲಾವಿದ ಗುರುತಿಸಿಕೊಂಡಿದ್ದಾನೆ. ಹಲವಾರು ಕಲಾಕೃತಿಯನ್ನು ರಚಿಸಿ ವಿಠಲನ ಮಂಟಪ ಅಲಂಕಾರಕ್ಕಾಗಿ ಚಿತ್ರಸಿದ ಕೊಡುಗೆ ಸಂತ ಶುಭರಾಯರಿಗೆ ತಲುಪುತ್ತದೆ. ಈ ಪ್ರಸಿದ್ಧ ಕಲಾವಿದನ ಹಿಂದಿರುವ ಯಾವುದೇ ರೀತಿಯ ಕಲೆಯ ಕುರಿತು ಪ್ರಭಾವವು ಕಂಡುಬಂದಿಲ್ಲವಾದರು ಇಷ್ಟದೇವರ ಪ್ರಾರ್ಥನೆಗಾಗಿ ರಚಿಸಿದ ಹಲವಾರು ಕೃತಿಗಳು ಇಂದು ಜಗತ್ ಪ್ರಸಿದ್ದ ಕಲಾಕೃತಿಗಳಾಗಿ ರೂಪಗೊಂಡಿವೆ.

ಶುಭರಾಯರು ಕನ್ನಡಿಗ ಎಂಬುದು ಬಹುಳಷ್ಟು ಜನಕ್ಕೆ ಗೊತ್ತಿಲ್ಲ ಗೊತ್ತಿದ್ದರೂ ಆತನಿಗೆ ಕನ್ನಡಿಗರು ಅದೆಷ್ಟು ಗೌರವ ಕೊಡುತ್ತಿದ್ದರೂ? ಎನೋ ಶುಭರಾಯರು ಮೂಲತಃ ಒಬ್ಬ ರಾಜಕಾರಣಿ. ಸಂನ್ಯಾಸಿಯಾಗುವುದಕ್ಕಿಂತ ಮೊದಲು ಆತ ಟಿಪ್ಪು ಸುಲ್ತಾನನ ದರ್ಬಾರದಲ್ಲಿ ಒಬ್ಬ ಮಂತ್ರಿಯಾಗಿದ್ದನೆಂದು ಹೇಳಲಾಗುತ್ತದೆ. ಈ ಬಗ್ಗೆ ಗಟ್ಟಿಯಾದ ಆಧಾರಗಳು ದೊರೆಯದಿದ್ದರು, ಆ ಕಾಲದ ಮದ್ರಾಸ್ ಗವರ್ನರರ ದಿನಚರಿಯಲ್ಲಿ "ಟಿಪ್ಪು ಸುಲ್ತಾನನು ಕೊನೆಯ ಕಾಳಗದ ಸಮಯದಲ್ಲಿ ಒಬ್ಬ 'ಸುಬ್ಬರಾಯ' ನನ್ನು ಕಳಿಸಿದ್ದನು" ಎಂದು ನಮೂದಾಗಿದೆ ಎಂಬ ಅಂಶವನ್ನು ಸೊಲ್ಲಾಪುರದ ಪ್ರಾಧ್ಯಾಪಕ ಸಂಶೋಧಕರೊಬ್ಬರು ಕಂಡುಹಿಡಿದಿದ್ದಾರೆ. ಇದೇ 'ಸುಬ್ಬರಾಯ' ಸೊಲ್ಲಾಪುರಕ್ಕೆ ಹೋದ ಮೇಲೆ ಮರಾಠಿಗರ ಬಾಯಲ್ಲಿ 'ಶುಭರಾಯ' ನಾಗಿದ್ದಾನೇನೋ ಮೂಲತಃ ಕೋಲಾರ ಜಿಲ್ಲೆಯ ಮಾಲೂರಿನವನಾದ ಶುಭರಾಯ ಅಚ್ಚ ಕನ್ನಡಿಗ, ತೆಲುಗು ತಮಿಳು ಭಾಷೆಗಳನ್ನು ಅರಿತಂತೆ ಮರಾಠಿ ಭಾಷೆಯನ್ನು ಬಲ್ಲವನಾಗಿದ್ದ ಟಿಪ್ಪು ಸುಲ್ತಾನನಿಗೆ ಶುಭರಾಯನ ಮೇಲೆ ವಿಶೇಷ ನಂಬಿಕೆಯಿತ್ತು. ಶುಭರಾಯನಿಗೂ ಟಿಪ್ಪುವಿನ ಮೇಲೆ ಅತೀವ ಶ್ರದ್ದೆ ಟಿಪ್ಪುವಿನ ಪತನದಿಂದ ಬಲು ನೊಂದವ ಶುಭರಾಯ ದೇಶಾಂತರ ಹೊರಟಿರಬೇಕು. ಗೊತ್ತು ಗುರಿ ಇಲ್ಲದೇ ಹೋರಾಟ ಶುಭರಾಯ ಸೊಲ್ಲಾಪುರಕ್ಕೆ ಬಂದಿರಬೇಕು. ಈ ವೇಳೆಗಾಗಲೆ ಆಧ್ಯಾತ್ಮದತ್ತವಾಲಿದ್ದ ಅವರ ಅಪೂರ್ವ ತೇಜಸ್ಸು ಮೂಡಿತ್ತೇನೊ. ಟಿಪ್ಪುವಿನಿಂದ ಹೊರಬಂದ ನಂತರ ಶುಭರಾಯರಿಗೆ ಜೀವನದಲ್ಲಿ ಬರುವಂತಹ ಅನೇಕ ಸಂಗತಿಗಳನ್ನು ತಮ್ಮ ಆಧ್ಯಾತ್ಮಿಕ ಜೀವನದಲ್ಲಿ ಕಳೆಯತೊಡಗಿರಬೇಕು.

---

೫. ಎನ್.ಸಿ. ದೇಸಾಯಿ : ಕಸ್ತೂರಿ ವಿಶೇಷ ಸಂಚಿಕೆ. ಸೆಪ್ಟೆಂಬರ್. ಪುಟ. ೨೦. ೧೯೮೬.

೬. ಎನ್.ಸಿ. ದೇಸಾಯಿ : ಕಸ್ತೂರಿ ವಿಶೇಷ ಸಂಚಿಕೆ. ಸೆಪ್ಟೆಂಬರ್. ಪುಟ. ೨೫. ೧೯೮೬.



ಶುಭರಾಯರು ಮುಂದೆ 'ಪಡಘಾಜಿಚಿಮಾಳಾ' ಎಂದು ಆ ಭೂಮಿಗೆ ಹೆಸರು ಅಲ್ಲಿಯೇ ಅವರ ವಾಸ ಇವರ ಆಧ್ಯಾತ್ಮಿಕ ನಡತೆಯನ್ನು ಕಂಡ ಜನ ಅಂದು ಸೊಲ್ಲಾಪುರದ ಕಿಲ್ಲೇದಾರನಾಗಿದ್ದ 'ಆಬಾಜಿ ಕುಂಡಲೆ' ಯವರಿಗೆ ತೋಟದಲ್ಲೊಬ್ಬ ಗುರುವಿನ ಆಗಮನವಾಗಿದೆಯೆಂದು ಅರಡಿದರು. ಕೂಡಲೆ ಕಲ್ಲೇದಾರನಾಗಿದ್ದರೂ ಧಾರ್ಮಿಕ ಪ್ರವೃತ್ತಿ, ಭಯಭಕ್ತಿ ಅವನಲ್ಲಿ ನೆಲೆಸಿತ್ತು. ಇವರ ದರ್ಶನಕ್ಕೆ ಬಂದ ಕೂಡಲೆ, ಇವರನ್ನು ಊರೊಳಗೆ ಬರುವಂತೆ ಪ್ರಾರ್ಥಿಸಿದ. ಆ ಕರೆಯನ್ನು ಮನ್ನಿಸಿ ಇವರು ಊರೊಳಗೆ ಹೋದರೆ ಕಿಲ್ಲೇದಾರ ಇವರಿಗೊಂದು ವಾಸಸ್ಥಳವನ್ನು ನಿರ್ಮಿಸಿಕೊಟ್ಟ ಆ ಸ್ಥಳವೇ ಊರೊಳಗೆ ಒಂದು ಆಧ್ಯಾತ್ಮಿಕ ಕೇಂದ್ರ. ಭಕ್ತರಿಗೆ ಭಜನೆಯ ಸ್ಥಾನವಾಗಿ ಪರಿಣಮಿಸಿತು. ಶುಭರಾಯರು ವಿಠೋಬನ ಭಕ್ತ ಪಂಡರಪುರ ತೀರ ಹತ್ತಿರವಿದ್ದರೂ ಅವರ್ಯಾಕೊವಿಠಲನನ್ನು ಇದ್ದಲ್ಲಿಯೇ ಆರಾಧಿಸಿದರು. ಆದಕ್ಕೆ ದೇವರದೆ ಅಪ್ಪಣೆಯಿರಬೇಕು ಅದೊಂದು ಆಷಾಢ ಏಕಾದಶಿಯ ದಿನ ಇವರಿಗೆ ದೃಷ್ಟಾಂತ ಚಂದ್ರಭಾಗನದಿಯಲ್ಲಿ ನಾನು ಇಂತಹ ಪ್ರದೇಶದಲ್ಲಿ ಇದ್ದೇನೆ ನನ್ನನ್ನು ಕರೆದುಕೊಂಡು ಹೋಗು ಎಂದು ಸ್ವಾಮಿ ಹೇಳಿದಂತೆ ಆಯಿತು. ಇವರು ತಡಮಾಡದೆಯೇ 'ಶೇಠೆ' ಎಂಬ ಭಕ್ತನನ್ನು ಕಳುಹಿಸಿ ಸ್ವಾಮಿಯನ್ನು ಕರೆತಂದರು. ಆದರೆ ಒಂದು ಆಶ್ಚರ್ಯ, ಆ ಮೂರ್ತಿ ಅಲ್ಲಿ ಸ್ಥಾಪಿತವಾಗಲಿಲ್ಲ ಮಂಟಪದಲ್ಲಿಯೇ ಇರಿಸಿ ಪೂಜಿಸಿದರು.

ಇವರು ಆಧ್ಯಾತ್ಮಿಕ ಬಲದಿಂದ ಇಷ್ಟದೇವರನ್ನು ಪಡೆದಿರುವುದು ಮಾತ್ರವಲ್ಲದೇ ಇದರೊಂದಿಗೆ ಚಿತ್ರಕಲೆಯನ್ನು ಬೆಳೆಸಿದರು. ಇವರು ಇಂತಹ ಕಠಿಣ ರಚಿಸಿದ್ದಾರೆ. ಅದಕ್ಕೆ ಸಂಗೀತ ಜೋಡಿಸಿದವರು ಅಂದು ಸೊಲ್ಲಾಪುರ ಕಿಲ್ಲೇಯಲ್ಲಿ ಖಜಾನೆದಾರರಾಗಿದ್ದ ದಿವಾಕರ ಶಾಸ್ತ್ರಿ. ಕಳೆದ ೧೫೦ ವರ್ಷಗಳ ಅವಧಿಯಲ್ಲಿ ಅವರ ಧಾರ್ಮಿಕ ಗೀತೆಗಳು ಗೋವಾ ಆಂದ್ರ ಪ್ರದೇಶ, ತಮಿಳುನಾಡಿನಲ್ಲಿಯೂ ಪ್ರಸಿದ್ದವಾಗಿದ್ದವೂ ಅವರು ಸ್ವತಃ ನುರಿತ ಸಂಗೀತಗಾರೂ ಹಾಗೂ ನೃತ್ಯ ಕಲಾವಿದರೂ ಆಗಿದ್ದರು. ಇವರು ಕ್ರಿ.ಶ. ೧೮೨೦ ರಲ್ಲಿ ಸಮಾಧಿಸ್ಥರಾದರು ಅವರು ಮನೆಗೆ ಬಿಟ್ಟು ಹೋದ ಅಮೂಲ್ಯ ಆಸ್ತಿಯೆಂದರೆ ಕಲಾಕೃತಿಗಳು.

ಈ ಕಲಾಕೃತಿಗಳೆ ಇಂದು ಯುವಪಿಳೆಗೆಗೆ ಸಾಕ್ಷಿಯಾಗಿ ನಿಂತಿವೆ. ಈ ಕಲಾವಿದನ ಧಾರ್ಮಿಕ ವಿಚಾರಗಳ ಹಿನ್ನಲೆಯಲ್ಲಿ ರಚನೆಯಾದ ಹಲವಾರು ಚಿತ್ರಗಳು ನಾಶವಾಗಿದ್ದು ಕರ್ನಾಟಕದ ದೃಶ್ಯಕಲಾ ಇತಿಹಾಸದಲ್ಲಿ ಅಪಾರವಾದ ನಷ್ಟವಾಗಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಅಜ್ಞಾತವಾದ ದೃಶ್ಯಕಲಾ ಲೋಕಕ್ಕೆ ಅಪಾರವಾದ ಆಸ್ತಿನೀಡಿದ ದೇಶದ ಮಹಾನ್ ಪ್ರಸಿದ್ಧ ಕಲಾವಿದನ ಕಲಾಕೃತಿಗಳು ಇಂದು ಹಲವಾರು ಪ್ರದೇಶಗಳಲ್ಲಿ ಪ್ರದರ್ಶನಗೊಳ್ಳುತ್ತಿರುವುದು ಹೆಮ್ಮೆಯ ವಿಷಯ. ಹಾಗೇ ಈ ಕಲಾವಿದನ ಕುರಿತು ಇಂದು ತಕಷ್ಟು ಮಟ್ಟಿಗೆಯಾದರು ಸಂಶೋಧನೆ ನಡೆಯುತ್ತಿರುವುದು ಅಲ್ಲದೇ ಲೇಖನ, ಪತ್ರಿಕೆಯಲ್ಲಿ ಬರುತ್ತಿರುವುದರಿಂದ ಅಂತಹ ಅಮೂಲ್ಯ ಆಸ್ತಿಯನ್ನು ಜೀವಂತವಾಗಿಸುತ್ತದೆ. ಇದಕ್ಕೆಲ್ಲ ಮುಖ್ಯವಾಗಿ ಆ ಕಲಾವಿದರೆ ಕಾರಣ.

ಶುಭರಾಯರ ಜೀವನದಲ್ಲಿ ನಡೆದ ಒಂದು ವಿಶಿಷ್ಟ ಘಟನೆಯೆಂದರೆ. ರಾಮಜೋಶಿಯರು ಆ ಕಾಲದ ಶಾಹೀರ ರಾಮ ಜೋಶಿಇಂದಿಗೂ ಮಹಾರಾಷ್ಟ್ರದಲ್ಲಿ ಬಹು ಪ್ರಸಿದ್ಧ ಆ ಕಾಲದಲ್ಲಿ ಅವನು

---

೭. ಎನ್.ಸಿ. ದೇಸಾಯಿ: ಪ್ರಜಾಮತ ದೀಪಾವಳಿ ವಿಶೇಷ, ನವೆಬಂರ್ ಪುಟ.೨೬ ೧ ನವಬಂರ್ ೧೦.೧೯೮೫.

೮. ಎನ್.ಸಿ. ದೇಸಾಯಿ: ಸಂಯುಕ್ತ ಕರ್ನಾಟಕ ಸಾಪ್ತಾಹಿಕ ಸೌರಭ ಪುಟ. ೯ ೧೯೯೨.



ಪೇಶ್ವೆಯವರ ಮನ್ನಣೆ ಪಡೆದವನು ಜನತೆಯ ಮೆಚ್ಚಿನ ಕವಿಯೂ ಆಗಿದ್ದನು ಇವನು ಪೇಶ್ವೆಯವರ ಕೊನೆಯ ಕಾಲದಲ್ಲಿ ಸೊಲ್ಲಾಪುರದ ರಾಜ ಜೋತಿಷಿಯೂ. ಶುಭರಾಯ ಮಠದ ಪುರೋಹಿತರು ಆಗಿದ್ದ ಮುದಗಲ್ ಶಾಸ್ತ್ರಿಗಳ ತಮ್ಮ ಎಂದು ಗೊತ್ತಾಗುತ್ತದೆ. ಮುದಗಲ್ ಎಂಬುದು ಕರ್ನಾಟಕದಲ್ಲಿಯ ಸ್ಥಳ ಹೀಗಾಗಿ ಈ ಮನೆತನವು ಕನ್ನಡ ಕುಟುಂಬ ಇರಬೇಕೆ ಎಂಬ ಶಂಕೆ ಈ ಮಾತುಗಳು ಅರ್ಥಪೂರ್ಣವಾಗಿವೆ. ಅಲ್ಲದೇ ಈ ಅವಧಿಯಲ್ಲಿ ರಾಮಜೋಶಿಯವರಿಗೆ "ತಮಾಷಾ" ದಲ್ಲಿ ಭಾಗವಹಿಸುವದು ಅಪವಿತ್ರವೆಂದು ತಿಳಿಯಲಾಗುತ್ತಿತ್ತು. ಚಿಮಾ ಎಂಬ ಯುವತಿ ಇವರ ಸಂಗೀತ ನಾದಕ್ಕೆ ಮರುಳಾಗಿ ಅಥವಾ ಅವಳ ನೃತ್ಯಕ್ಕೆ ಅವನು ಮರುಳಾಗಿದ್ದನೂ ತಿಳಿಯದ ವಿಷಯ ಇವರ ಅಣ್ಣನಾದ "ಮುದಗಲ್ ಶಾಸ್ತ್ರಿ" ಯವರು ಇವರನ್ನು ಮನೆಯಿಂದ ಹೋರಹಾಕಿದರು ಇದಕ್ಕೆಲ್ಲ ಕಾರಣ ಶುಭರಾಯರೇ ಎಂದು ತಿಳಿದುಕೊಂಡಿದ್ದ ರಾಮಜೋಶಿಯವರು ನಂತರ ವಿಷಯತಿಳಿದು ಶುಭರಾಯರಿಗೆ ಕ್ಷಮೇ ಕೇಳಿದರು. ಎಕೆಂದರೆ ಮುದಗಲ್ ಶಾಸ್ತ್ರಿಯವರು ಶುಭರಾಯ ಮಠದ ಪೂರೋಹಿತರು ಆಗಿದ್ದರು.

ಶುಭರಾಯರು ತಮ್ಮ ಮಠದಲ್ಲಿ ಆಷಾಢ ಮತ್ತು ಕಾರ್ತೀಕ ಏಕಾದಶಿ ಬಹು ಮಹತ್ವದ ಹಬ್ಬಗಳು ಈ ಎರಡು ದಿನ ರಥೋತ್ಸವ ನಡೆಯುತ್ತದೆ. ರಾಮನವಮಿ ಜನ್ಮಾಷ್ಠಮಿಗಳನ್ನು ಕ್ರಮಕ್ಕೆ ಮುಂದಾಗಿರುವುದು ತಿಳಿಯದ ವಿಷಯವಾಗಿದೆ. ಮೊದಲೂ ರಾಜಕಾರಣಿಯಾಗಿ ಸಂಗೀತಗಾರನಾಗಿ, ಕಲಾವಿದನಾಗಿ, ಕವಿಯಾಗಿ ಯೋಗಪುರುಷನಾಗಿ ರೂಪುಗೊಂಡಿರುವುದು ಅದ್ಭುತ.

ಶುಭರಾಯರು ಕವಿಯೂ ಆಗಿದ್ದರು. ಮರಾಠಿಯಲ್ಲಿ ೧೪೭ ಭಕ್ತಿ ಕಾವ್ಯಗಳನ್ನು ಅವರು ಆಚರಿಸುವ ರೂಢಿತಂದರು. ಸಂಗೀತಗಾರರಿಗೆ ವಸಂತ ಪಂಚಮಿಯನ್ನು ಆಚರಿಸಲಾಗುತ್ತದೆ. ಈ ಸಮಯದಲ್ಲಿ ಬಂದ ಸಂಗೀತಗಾರರಿಗೆ ಶಾಲು ಹೊದಿಸಿ ಮರ್ಯಾದಿಸುವ ಪಾಠ ಶುಭರಾಯರ ಕಾಲದಿಂದಲೆ ಬಂದುದು ಈ ಶಾಲು ಹೊದಿಸುವ ಪದ್ಧತಿ ಇಂದಿಗೂ ನಡೆದುಕೊಂಡುಬಂದಿದೆ. ಈ ಮಾತು ಅರ್ಥಪೂರ್ಣವಾಗಿವೆ. ಒಬ್ಬ ಕಲಾವಿದನಾಗಿ ಕವಿಯಾಗಿ ಸಂಗೀತಗಾರನಾಗಿ ಕಲಾವಿದರಿಗೆ ಸಿಗುವ ಸ್ಥಾನಮಾನ ಗೌರವರೊಂದಿಗೆ ವಿಶೇಷವಾಗಿ ಅಧ್ಯಾತ್ಮದ ಕುರಿತು ದೇವರನ್ನು ಪೂಜಿಸುವ ಕಲಾವಿದ ಕೊನೆಗೂ ತನ್ನ ಇಷ್ಟ ದೇವರನ್ನು ಕನಸಿನಲ್ಲಿ ಕಂಡು ಹಾಗೇ ಇದರೊಂದಿಗೆ ಅವರ ಹಲವಾರು ಕಲಾಕೃತಿಗಳು ರಚನೆಯಾದವು.

ಶುಭರಾಯರ ನಂತರ ಈ ಮಠಕ್ಕೆ ಯಾರೂ ಪೀಠಸ್ಥರಾಗಿಲ್ಲ. ಶುಭರಾಯರ ಶಿಷ್ಯರಾಗಿಯೇ ನಡೆದುಕೊಂಡು ಬಂದ ಬಾರಾಮತಿಯಿಂದ ಬಂದ 'ಬುವಾ' ಎಂಬ ಕುಟುಂಬದ ವಂಶಜರೇ ಮಠದ ಕಾರುಬಾರುಗಳನ್ನು ಮುಂದುವರೆಸಿಕೊಂಡು ಹೋಗಿದ್ದಾರೆ. ಮಠಕ್ಕೆ ಆಸ್ತಿ ಎಂದರೆ ಈ ಗಿರುವ ಚಿತ್ರಗಳೇ ಎನ್ನಬೇಕು ಹಾಗೇ ಇವರೇ ಶುಭರಾಯರ ಚಿತ್ರಗಳ ಸಂಗ್ರಹವನ್ನು ಒಳ್ಳೇಯ ರೀತಿಯಲ್ಲಿ ಸಂಗ್ರಹಮಾಡಿದ್ದಾರಲ್ಲದೇ ಅಲ್ಲಲ್ಲಿ ಕೆಲವು ಪ್ರದರ್ಶನಗಳನ್ನು ಏರ್ಪಡಿಸಿದ್ದಾರೆ. ಪ್ರಥಮ ಪ್ರದರ್ಶನ ಸೊಲ್ಲಾಪುರದಲ್ಲಿಯೇ ನಡೆದು ಇದರ ಉಧ್ಘಾಟನೆಯನ್ನು 'ಪಂಡಿತ ಜವಾಹರಲಾಲ್ ನೆಹರು' ಅವರು ನೆರವೇರಿಸಿದ್ದರಂತೆ ನಂತರದಲ್ಲಿ, ಮುಂಬೈ. ಪುಣೆ. ಹಾಗೂ ಗುಲಬರ್ಗಾದಲ್ಲಿ ಪ್ರದರ್ಶನಗಳು ನಡೆದಿವೆ.

---

೯. ಎಸ್.ಸಿ. ದೇಸಾಯಿ : ಉದಯವಾಣೀ ದೀಪಾವಳಿ ವಿಶೇಷಾಂಕ ಪುಟ.ಟ ೯೮೪



ಇವನೆಲ್ಲಾ ಏರ್ಪಡಿಸಿದವರು ಶ್ರೀಪುರುಷೋತ್ತಮ ಜನಾದಿ ಬುವಾ ಅವರೆ ಮತ್ತು ಇವರು ಪತ್ರಾಗಾರರೂ ಸಹ ಆಗಿದ್ದಾರೆ ಬುವಾ ಅವರಿಂದ ಶುಭರಾಯರ ಅಪೂರ್ವಚಿತ್ರಗಳು ನಾಲ್ಕು ಜನರ ಕಲಾ ರಸಿಕರ ಕಣ್ಣಿಗೆ ಬೀಳುವಂತಾಗಿವೆ.[೧೦] ಇಲ್ಲಿ ಮುಖ್ಯವಾಗಿ ಕರ್ನಾಟಕದ ಕಲಾ ಇತಿಹಾಸದಲ್ಲಿ ಒಬ್ಬ ಪ್ರತಿಷ್ಠಿತ ಕಲಾವಿದನ ಕುರಿತು ಬುವಾ ಅವರು ಮಾಡಿರುವ ಸಾಧನೆ ಅಮೂಲ್ಯವಾದುದು. ಕಲಾವಿದ ಕರ್ನಾಟಕದವನಾಗಿ ಸೊಲ್ಲಾಪುರದಲ್ಲಿ ಬಾಳಿ ಬದುಕಿದ ಜೀವನ, ಮತ್ತು ಅವರುಗಳು ಚಿತ್ರಿಸಿದ ಸಾವಿರಾರು ಕಲಾಕೃತಿಗಳು, ಹಾಗೂ ಅವರರೊಂದಿಗೆ ಇದ್ದ ಬುವಾ ಅವರ ಸಂಬಧ ಕುರಿತು ಸಮಗ್ರವಾಗಿ ತಿಳಿಸುವುದರ ಜೋತೆಗ ಕಲೆಗೆ ಹೆಚ್ಚು ಪ್ರೋತ್ಸಾಹ ಕೊಟ್ಟು ಅವರ ಹಲವಾರು ಕಲಾಕೃತಿಗಳನ್ನು ಪ್ರದರ್ಶನಮಾಡಿನಾಡಿಗೆ ಪರಿಚಯಿಸುವ ಪ್ರಯತ್ನ ಮಾಡಿದ್ದಾರೆ.

ಹೊರವಲಯದ ಪಡಘಾಚಿಮಳ ಎಂಬ ತೋಟಕ್ಕೆ ಈ ತೋಟದಲ್ಲಿ ಅವರು ತಮ್ಮ ಇಷ್ಟದೈವ ಮಾರುತಿ ಧ್ಯಾನದಲ್ಲಿ ಕೇಲವು ದಿನ ಕಳೆದರು. ಅವರೊಬ್ಬ ಮಹಾ ಸತ್ಪುರುಷರೆಂದು ಪರಿಗಣಿಸಿ ಸುತ್ತಮುತ್ತಲಿನ ಜನತೆ ತೋಟಕ್ಕೆ ಬಂದು ಗೌರವಿಸಿದರು. ಈ ಸುದ್ದಿ ಸೊಲ್ಲಾಪುರದ ಕಿಲ್ಲೇದಾರ ಅಂಬಾಜಿ ಕುಂಡಲೆ ಅವರ ಕಿವಿಗೆ ಬಿತ್ತು ಶುಭರಾಯನ ವಾಸಕ್ಕೆ ಅನುಕೂಲವಾಗಲೆಂದು ಆ ತೋಟವನ್ನು ಅವರ ಹೆಸರಿಗೆ ಬರೆದನಂತೆ ಇಂದು ಅದೇ ಸ್ಥಳದಲ್ಲಿ ಶುಭರಾಯರ ಮಠವಿದೆ.[೧೧] ಇಲ್ಲಿಯೆ ವಾಸವಾಗಿ ಹಲವಾರು ವರ್ಷಗಳು ಕಳೆದ ಶುಭರಾಯರು ತಮ್ಮ ದೈವಿ ಆರಾಧನೆಗಾಗಿ ಹಲವಾರು ಕಲಾಕೃತಿಗಳನ್ನು ನಿರ್ಮಿಸಿದ್ದಾರೆ. ಇವರು ರಚಿಸಿ ಬಿಟ್ಟುಹೋದ ಕಲಾಕೃತಿಗಳು ಇಂದು ಇವರು ಇದ್ದ ಸ್ಥಳದ ಮಠದಲ್ಲಿವೆ. ಶುಭರಾಯರ ಹೆಸರಿನಲ್ಲಿ ಆರ್ಟ ಗ್ಯಾಲರಿಯನ್ನು ಸರ್ಕಾರ ನಿರ್ಮಿಸಿದೆ. ಇದಕ್ಕೆಲ್ಲ ಮುಖ್ಯಕಾರಣರಾದ ಬುವಾ ಮನೆತನವನ್ನು ಸ್ಮರಿಸುವುದು ಅವಶ್ಯವಾಗಿದೆ.

ಇಂದಿನಂತೆ ಆ ಕಾಲದಲ್ಲಿ ಚಿತ್ರಕಾರನ ಸಲಕರಣೆಗಳು ಮಾರುಕಟ್ಟೆಯಲ್ಲಿ ಸಿಗುವ ವಸ್ತುಗಳಾಗಿರಲ್ಲಿಲ್ಲ. ಬಣ್ಣಗಳನ್ನು ವನಸ್ಪತಿಗಳಿಂದ ಚಿತ್ರಕಾರನೇ ನಿರ್ಮಿಸಿಕೊಳ್ಳಬೇಕಿತ್ತು. ಕುಂಚಗಳನ್ನು ತಾನೆ ಸಿದ್ಧಗೊಳಿಸಿಕೊಳ್ಳಬೇಕಾಗಿತ್ತು. ಶುಭರಾಯರ ಕಾಲಕ್ಕೆ ಕಾಗದವೆನೋ ಸಿದ್ಧವಾಗುತ್ತಿತ್ತು. ಆದರೆ ಇಂದಿನಷ್ಟು ಉತ್ಕೃಷ್ಟವಾದ ಕಾಗದವಲ್ಲ ಕೈಯಿಂದ ತಯಾರಿಸಿದ ಕಾಗದವು ಲಭ್ಯವಿತ್ತು. ಆದರೆ ಅಂದಿನ ದಿನಮಾನಗಳಲ್ಲಿ ಉತ್ತಮ ಕಾಗದವು ದೊರೆತ್ತಿದ್ದರು. ಸಂತ ಶುಭರಾಯರು ಕಲೆಗಾಗಿ ಕಲಾಕೃತಿಗಳನ್ನು ರಚಿಸಬೇಕೆಂಬ ಉದ್ದೇಶವಿಲ್ಲದೆ, ಹಲವಾರು ಕಲಾಕೃತಿಗಳನ್ನು ತಮ್ಮ ಇಷ್ಟದೇವರ ಸಂತೃಪ್ತಿಗಾಗಿ ಅಲಂಕಾರಕ್ಕಾಗಿ ಕಲಾಕೃತಿಗಳನ್ನು ರಚಿಸಿದ್ದಾರೆ. ಇಂದು ಉತ್ತಮ ಕಾಗದದ ಮೇಲೆ ರಚಿಸಿದ್ದರೆ, ಅವುಗಳನ್ನು ಸಂವರಕ್ಷಿಸಬಹುದಿತ್ತು. ಈ ಚಿತ್ರಗಳನ್ನು ಹಿಂದಿನ ವರ್ಷ ತಯಾರಿಸಿದ ಚಿತ್ರಗಳ ಮೇಲೆ ಅಂಟಿಸುತ್ತಾ ಬಂದಿದ್ದಾರೆ. ಹೀಗಾಗಿ ಎಷ್ಟೋ ಚಿತ್ರಗಳು ಇದ್ದು ಇಲ್ಲದಂತೆ ಹಾಳಾಗಿ ಹೋಗಿವೆ.

---

೧೦. .ಎಸ್.ಸಿ. ದೇಸಾಯಿ : ದೀಪಾವಳಿ ವಿಶೇಷಾಂಕ ಪುಟ.ಟ ೧೯೮೪

೧೧. ಎಸ್.ಸಿ. ದೇಸಾಯಿ: ಸಂಯುಕ್ತ ಕರ್ನಾಟಕ ಸಾಪ್ತಾಹಿಕ ಸೌರಭ ಪುಟ.೯-೯-೧೯೯೨.



ಶ್ರೀ ಸಂತ ಶುಭರಾಯರ ಆರಾಧ್ಯ ದೇವ ಶ್ರೀ ಪಾಂಡುರಂಗ



ಶ್ರೀ ಸಂತ ಶುಭರಾಯರ ಸಮಾಧಿ

ಅಧ್ಯಾಯ : ಮೂರು

## ಸಂತ ಶುಭರಾಯರ ದಶಾವತಾರದ ಚಿತ್ರಕಲಾಕೃತಿಗಳು





ಅಧ್ಯಾಯ ಮೂರು

# ಸಂತ ಶುಭರಾಯರ ದಶಾವತಾರದ ಚಿತ್ರಕಲಾಕೃತಿಗಳು

ಕಲೆ ಎನ್ನುವುದು ಮಾನವನ ವೈಶಿಷ್ಟ್ಯ. ಅಂತೆಯೇ ನಮ್ಮ ಸುತ್ತಲಿನ ನಿಸರ್ಗ ಹಾಗೂ ದೈನಂದಿನ ಜನಜೀವನಗಳು, ಜನಸಾಮಾನ್ಯರಲ್ಲಿ ಪ್ರಭಾವ ಬೀರುವಂತೆ ಕಲಾವಿದನ ಮನಸ್ಸಿನ ಮೇಲೂ ಪ್ರಭಾವ ಬೀರುತ್ತದೆ. ಆದರೆ ಕಲಾವಿದನಲ್ಲಿರುವ ಆತನ ಸಂವೇದನೆಯ ಹೊರಗಿನ ಈ ಘಟನೆ ಹಾಗೂ ದೃಶ್ಯಗಳು ಉಳಿದವರಿಗಿಂತ ಭಿನ್ನವಾಗಿ, ಹೆಚ್ಚು ತೀವ್ರವಾಗಿ ಸ್ಪಂದಿಸುತ್ತದೆ. ಈ ಸ್ಪಂದನ ಹಾಗೂ ತುಡಿತಗಳು ಅವನ ಮಾಧ್ಯಮದ ಮೂಲಕ ಪ್ರಕಟವಾಗಿ ಕಲಾಕೃತಿಯೆನಿಸುತ್ತದೆ.

ವಿವಿಧ ಕಲೆಗಳು ಮನುಷ್ಯನ ವಿವಿಧ ಇಂದ್ರಿಯಗಳಿಗೆ ಸಂಬಂಧಿಸಿ ತೃಪ್ತಿಕೊಡುತ್ತವೆ. ಹೀಗೆ ಸಂಗೀತ ಹಾಗೂ ಸಾಹಿತ್ಯಗಳು ಕಿವಿಗೆ ಸಂಬಂಧಿಸಿದ ಕಲೆಗಳಾಗಿವೆ. ಸಾಹಿತ್ಯವನ್ನು ಕಿವಿಯಿಂದ ಕೇಳುವಂತೆ ಕಣ್ಣಿನಿಂದ ಓದಿಯೂ ಸಂತಸ ಪಡಬಹುದು ಆದರೆ ಸಂಗೀತಕ್ಕೆ ಕಿವಿಯೇ ಪ್ರಧಾನ ಇಂದ್ರಿಯವಾಗಿದೆ. ಇದರ ಹಾಗೆಯೇ ಚಿತ್ರಕಲೆ, ಶಿಲ್ಪಕಲೆ ಮತ್ತು ವಾಸ್ತುಶಿಲ್ಪಗಳಂತಹ ಕಲೆಗಳು ಕಣ್ಣಿಗೆ ಸಂಬಂಧಿಸಿದವು.[1] ಸಂತ ಶುಭರಾಯರು ನೃತ್ಯ, ಸಾಹಿತ್ಯ, ತತ್ವಜ್ಞಾನಿ, ಕಲಾವಿದರಾಗಿ ಗುರುತಿಸಿಕೊಂಡಿದ್ದಾರೆ. ಹಾಗೆ ಇವರ ಕಲೆಯಲ್ಲಿ ಸುತ್ತಮುತ್ತಲಿನ ಪರಿಸರ, ಪೌರಾಣಿಕ ವಿಷಯಗಳನ್ನಾಧರಿಸಿದವುಗಳಾಗಿವೆ. ಮತ್ತು ಅದರಲ್ಲಿ ವಿಷ್ಣುವಿನ ದಶಾವತಾರ, ಕೃಷ್ಣನ ಲೀಲೆಗಳು ಇತ್ಯಾದಿ ವಸ್ತುವಿಷಯಗಳು ಒಳಗೊಂಡಿವೆ. ಇವರ ಕಲಾಕೃತಿಯಲ್ಲಿ ರಸಗಳನ್ನು ಕಾಣುವಂತಹ ವಿಚಾರಗಳು ಮೂಡಿಬರುತ್ತವೆ.

ಸಂತ ಶುಭರಾಯರು ರಚಿಸಿದ ಹಲವಾರು ಕಲಾಕೃತಿಗಳನ್ನು ಅಧ್ಯಯನದ ದೃಷ್ಟಿಯಿಂದ ಇಲ್ಲಿ ದಶವತಾರದ ಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

---

೧. ಚಿ.ಸು. ಕೃಷ್ಣ ಸೆಟ್ಟಿ : ದೃಶ್ಯಕಲೆ ಎಂದರೇನು?, ಪುಟ ೫



**ವಿಷ್ಣುವಿನ ದಶಾವತಾರದ ಚಿತ್ರಗಳು :**

ವಿಷ್ಣುವಿನ ದಶಾವತಾರಗಳು ಅನೇಕ ಶಾಸ್ತ್ರಗ್ರಂಥಗಳಲ್ಲಿ ಉಲ್ಲೇಖಗೊಂಡಂತೆ ಕ್ರಮಾನುಸಾರವಾಗಿ ಮೊದಲಿಗೆ ಬರುವುದು ಮತ್ಸ್ಯಾ ಅವತಾರ, ಕೂರ್ಮಾ, ವರಾಹ, ನರಸಿಂಹ. ವಾಮನ, ಪರಶುರಾಮ, ರಾಮಾವತಾರ ಕೃಷ್ಣಾ, ಬೌದ್ಧ, ಕೊನೆಯದಾಗಿ ಕಲ್ಕೀಯಾಗಿದೆ. ಇಲ್ಲಿ ಶ್ರೀ ವಿಷ್ಣು ಭೂಮಿಯಲ್ಲಿ ಹತ್ತು ರೀತಿಯಿಂದ ಜನ್ಮ ಪಡೆದು ಪ್ರತಿಯುಗದಲ್ಲಿಯೂ ಒಂದೊಂದು ವಿಧದಲ್ಲಿ ಅವತಾರ ಹೊಂದಿದ್ದಾನೆ. ಯಾವುದೇ ಅವತಾರವನ್ನು ಹೊಂದಿ ಬಂದರು ಪ್ರಮುಖ ಉದ್ದೇಶ ಭಕ್ತರನ್ನು ಉದ್ಧಾರ ಮಾಡುವದಾಗಿದೆ.

ಮಹಾಭಾರತದ ಸನ್ನಿವೇಶ ಒಂದರಲ್ಲಿ ಧರ್ಮರಾಜನು ಸಹಜ ಕುತೂಹಲದಿಂದ ದಶಾವತಾರದ ಮಹಿಮೆಯ ಬಗ್ಗೆ ಮಾರ್ಕಂಡೇಯ ಮಹರ್ಷಿಗಳನ್ನು ಕೇಳಿದಾಗ ಅವರು ವಿಸ್ತಾರವಾಗಿ ಹತ್ತು ಅವತಾರಗಳ ಬಗ್ಗೆ ವಿವರಣೆ ನೀಡುತ್ತಾರೆ. ತಮೋಗುಣ ಅದರ ಪರಿಣಾಮವನ್ನು ನಿಯಂತ್ರಿಸುವುದು ಸತ್ವಗುಣವನ್ನು ಉಳಿಸುವುದು ವಿಷ್ಣುವಿನ ಅವತಾರಗಳಲ್ಲಿನ ಮುಖ್ಯ ಗುಣವೆಂದು ವರ್ಣಿಸಲಾಗಿದೆ.

'ಮತ್ಸ್ಯ ಕೂರ್ಮವರಾಹಶ್ಚ ನಾರಸಿಂಹಶ್ವ ವಾಮನ।
ರಾಮೋ ರಾಮಶ್ಚ ಕೃಷ್ಣಶ್ಚ ಬುದ್ಧ ಕಲ್ಕಿನಮೋ ನಮಃ॥'

ಶ್ರೀಹರಿಯು ಲೋಕಕಲ್ಯಾಣಕ್ಕಾಗಿ ಹತ್ತು ಅವತಾರಗಳನ್ನು ತಾಳಿದ ವಿವರಣೆಯನ್ನು ಈ ಶ್ಲೋಕವು ತಿಳಿಸುತ್ತದೆ.[೨]

ಈ ಅವತಾರಗಳನ್ನು ಕಲಾವಿದ ಸಂತ ಶುಭರಾಯ ತನ್ನದೇ ಅದ ಗ್ರಹಿಕೆಯಲ್ಲಿ ಕುಂಚದಲ್ಲಿ ಸೆರೆಹಿಡಿದಿದ್ದಾನೆ. ಅವನದೇ ಆದ ವರ್ಣವಿನ್ಯಾಸ, ಸಂಯೋಜನೆ, ತಂತ್ರಗಾರಿಕೆ, ವಸ್ತುವಿನ್ಯಾಸಗಳಲ್ಲಿ ಚಿತ್ರಣ ಮಾಡಿದ್ದು ಅವುಗಳನ್ನು ಇಲ್ಲಿ ಒಂದೊಂದಾಗಿ ವಿಶ್ಲೇಷಣೆಗೆ ಒಳಪಡಿಸಿದೆ.

**ಶ್ರೀ ಶೇಷಶಾಹಿ ವಿಷ್ಣು (ಚಿತ್ರ ಸಂಖ್ಯೆ ೦೧)**

ಇಲ್ಲಿ ವಿಶೇಷವಾಗಿ ವಿಷ್ಣು ಐದು ಹೆಡೆಯ ಹಾವಿನ ಹಾಸಿಗೆಯ ಮೇಲೆ ಮಲಗಿದ್ದಾನೆ. ಕಿರೀಟಾಭರಣಧಾರಿಯಾದ ವಿಷ್ಣು ನಾಲ್ಕು ಕೈಗಳನ್ನು ಹೊಂದಿದ್ದಾನೆ. ಒಂದು ಕೈಯಲ್ಲಿ ಚಕ್ರ ಮತ್ತೊಂದು ಕೈಯಲ್ಲಿ ಶಂಖ, ಮತ್ತೊಂದು ಕೈಯನ್ನು ತಲೆಯಾಸರವಾಗಿ ಬಳಸಿಕೊಂಡಿದ್ದಾನೆ. ಸೇವಕಿಯರು ವಿಷ್ಣುವಿನ ಕಾಲನ್ನು ಒತ್ತುತ್ತ ಕುಳಿತ್ತಿದ್ದಾರೆ. ಹಿಂಭಾಗದಲ್ಲಿ ಸೇವಕನಂತೆ ಇದ್ದು ಮೂಖಮಾತ್ರ ವರಾಹ ರೂಪಹೊಂದಿದ ವ್ಯಕ್ತಿಯೊಬ್ಬ ಚಾಮರ ಬಿಸುತ್ತಿದ್ದಾನೆ. ಕೆಂಪು, ವಸ್ತ್ರ, ಹಳದಿ ಪಂಚೆತೊಟ್ಟ ವಿಷ್ಣು ಬಿಳಿವರ್ಣದಲ್ಲಿ ರಚನೆಯಾದ ನಾಗ ಸರ್ಪದ ಮೇಲೆ ಮಲಗಿದ್ದಾನೆ. ಸೇವಕಿಯರು ಕಿರೀಟಾಭರಣಧಾರಿಯಾಗಿ ಕೆಂಪು ಸೀರೆ, ಕುಪ್ಪಸ ತೊಟ್ಟಿದ್ದಾರೆ. ಸೇವಕನು ಹಳದಿ ಪಂಚೆ ಕಿರೀಟಾಭರಣಧಾರಿಯಾಗಿದ್ದಾನೆ. ಕೈಯಲ್ಲಿ ಚಾಮರ ಬಿಳಿ ಮತ್ತು ಹಳದಿ ವರ್ಣದಲ್ಲಿ ಮೂಡಿಬಂದಿದೆ. ಅಲ್ಲಲ್ಲಿ ಖಾಲಿಜಾಗವನ್ನು ಎಲೆಹೂಗಳಿಂದ ತುಂಬಿಸಲಾಗಿದೆ.

---

೨. ಆನಂದ.ಕೆ. ಪೂಜಾರ : ಕರಾವಳಿ ಕರ್ನಾಟಕದ ಕಾವಿಚಿತ್ರಕಲೆ, ಪುಟ ೧೧೪



ಈ ಚಿತ್ರದಲ್ಲಿ ವರ್ಣಗಳ ಹಿತಮಿತವಾದ ಸಾಂಗತ್ಯ ಇದೆ. ಚಿತ್ರದ ಸಂಯೋಜನೆಯಲ್ಲಿ ಸಮತೋಲವನ್ನು ಕಾಯ್ದುಕೊಳ್ಳಲಾಗಿದೆ, ಸಮಿಪ ದೂರದ ಕಲ್ಪನೆ ಅರಿವು ಶುಭರಾಯನಿಗೆ ಸ್ಪಷ್ಟವಾಗಿ ಇರುವುದು ಈ ಚಿತ್ರದಿಂದ ಗೊತ್ತಾಗುತ್ತದೆ. ಚಿತ್ರದಲ್ಲಿ ದ್ವಿಆಯಾಮದ ವಿನ್ಯಾಸದ ಪರಿಕಲ್ಪನೆ ಕಂಡುಬರುತ್ತದೆ. ಪ್ರಮುಖ ವ್ಯಕ್ತಿಗೆ ಸಲ್ಲಬೇಕಾದ ಪ್ರಾಶಸ್ತ್ಯವನ್ನು ಕಲ್ಪಿಸಲಾಗಿದೆ. ನೆರಳು ಬೆಳಕಿನ ವಿನ್ಯಾಸ ಅಷ್ಟೊಂದು ಕಂಡುಬರುವುದಿಲ್ಲವಾದರೂ ವರ್ಣಗಳಲ್ಲಿ ಅಂದರೆ ದಪ್ಪ ತೆಳುವರ್ಣಗಳಿಂದ ಚಿತ್ರ ಸಮತೋಲನವನ್ನು ಹೊಂದಿದೆ. ಸಂಯೋಜನೆ, ಯಥಾದರ್ಶನದ ಎಲ್ಲಾ ಅಂಶಗಳು ಈ ಚಿತ್ರದಲ್ಲಿ ಅಳವಡಿಸಿಕೊಳ್ಳಲಾಗಿದೆ.

**೧. ವಿಷ್ಣುವಿನ ಮತ್ಸಾವತಾರ (ಚಿತ್ರ ಸಂಖ್ಯೆ ೨)**

ವಿಷ್ಣುವಿನ ದಶಾವತಾರಗಳಲ್ಲಿ ಮೊದಲನೆಯದು ಮತ್ಸ್ಯಾವತಾರವಾಗಿದ್ದು ಇಲ್ಲಿ ವಿಷ್ಣುವು ಮತ್ಸ್ಯರೂಪಧರಿಸಿದ್ದು ಕಂಡುಬರುತ್ತದೆ. ಈ ಚಿತ್ರವು ಅಖಂಡವಾದ ಆಯತ ಆಕೃತಿಯಲ್ಲಿ ಅಂದರೆ ಉದ್ದವಾದ ಪಟ್ಟಿಕೆಯಲ್ಲಿ ಕಂಡು ಬರುತ್ತದೆ. ಮತ್ಸ್ಯಾವತಾರದಲ್ಲಿ ವಿಷ್ಣುವಿನ ಮೈಬಣ್ಣವಾಗಿ ನೀಲಿಯನ್ನು ಬಳೆಯಲಾಗಿದೆ. ಕಿರೀಟಧಾರಿಯಾದ ವಿಷ್ಣು ನಾಲ್ಕು ಕೈಗಳನ್ನು ಹೊಂದಿದ್ದಾನೆ. ಬಾಗಿದ ಕಪ್ಪು ಹುಬ್ಬಿನ ಕೆಳಭಾಗದಲ್ಲಿ ಕಲಾವಿದ ತನ್ನದೇಯಾದ ಶೈಲಿಯಲ್ಲಿ ಉದ್ದವಾದ ಕಣ್ಣುಗಳನ್ನು ರಚನೆಮಾಡಿದ್ದಾನೆ. ಮೇಲಿನ ಎರಡು ಕೈಗಳಲ್ಲಿ ಆಯುಧಗಳನ್ನು ಹಿಡಿದಿರುವ ವಿಷ್ಣುವಿನ ಕೆಳಗಿನ ಕೈಗಳಲ್ಲಿ ಯಾವ ಆಯುಧವು ಕಂಡುಬರುವುದಿಲ್ಲ ಕತ್ತಿನ ಭಾಗದಿಂದ ಕೆಂಪು ವಸ್ತ್ರವು ಅಕ್ಕಪಕ್ಕದಲ್ಲಿ ಇಳಿಬಿದ್ದಿರುವುದು ಕಂಡುಬರುತ್ತದೆ. ಸೊಂಟದ ಕೆಳಭಾಗದಿಂದ ವಿಷ್ಣು ಮೀನಿನ ರೂಪಧರಿಸಿದ್ದು ಇದು ಹಿನ್ನಲೆಯ ಲೇಪನ ಹಳದಿವರ್ಣದ ಮೇಲೆ ಕಪ್ಪು ವರ್ಣದಿಂದ ರೇಖೆಯನ್ನು ರಚಿಸಲಾಗಿದೆ. ಹಾಗೇ ಇಲ್ಲಿ ಹೋರ ರೇಖೆಗೆ ಹೆಚ್ಚಾಗಿ ಕಪ್ಪು ಮಿಶ್ರಿತ ಹಳದಿ ವರ್ಣವನ್ನೇ ಬಳಸಲಾಗಿದೆ. ಅಕ್ಕ ಪಕ್ಕದಲ್ಲಿ ಕಂಡುಬರುವ ಎಲೆಗಳನ್ನು ಕಲಾವಿದ ಜಾಣ್ಮೆಯಿಂದ ಕಮಾನಿನಾಕಾರದಲ್ಲಿ ಚಿತ್ರಿಸಿದ್ದಾನೆ. ಇಲ್ಲಿ ಎಲೆಗಳಿಗೆ ದಟ್ಟ ಹಸಿರು ಬಣ್ಣ ಬಳಸಲಾಗಿದೆ. ಹೂಗಳಿಗೆ ಕೆಂಪು ವರ್ಣಬಳಸಲಾಗಿದೆ. ಕಿರೀಟದ ಮೇಲ್ಭಾಗದ ತುದಿಯಲ್ಲಿ ಪ್ರತ್ಯೇಕವಾದ ಎಲೆಹೂವುನ್ನು ರಚಿಸಿದ್ದಾರೆ. ಈ ಚಿತ್ರವು ಕಾಗದದ ಮೇಲೆ ರಚನೆಯಾಗಿದ್ದು ಇದೊಂದು ಕಿರುರೂಪ ಕಲೆಯ ಉತ್ತಮ ಚಿತ್ರವಾಗಿ ಮೂಡಿಬಂದಿದೆ. ಚಿತ್ರದಲ್ಲಿ ದ್ವಿಆಯಾಮದ ವಿನ್ಯಾಸದ ಪರಿಕಲ್ಪನೆ ಕಂಡುಬರುತ್ತದೆ. ಪ್ರಮುಖ ವ್ಯಕ್ತಿಗೆ ಸಲ್ಲಿಸಬೇಕಾದ ಪ್ರಾಶಸ್ತ್ಯವನ್ನು ಕಲ್ಪಸಲಾಗಿದೆ. ನೆರಳು ಬೆಳಕಿನ ವಿನ್ಯಾಸವು ಅಷ್ಟೊಂದು ಕಂಡುಬರುವುದಿಲ್ಲವಾದರೂ ವರ್ಣಗಳಲ್ಲಿ ಅಂದರೆ ದಪ್ಪ, ತೆಳುವರ್ಣಗಳಿಂದ ಚಿತ್ರ ಸಮತೋಲನವನ್ನು ಹೊಂದಿದೆ. ಸಂಯೋಜನೆ ಯಥಾದರ್ಶನದ ಎಲ್ಲಾ ಅಂಶಗಳು ಈ ಚಿತ್ರದಲ್ಲಿ ಅಳವಡಿಸಿಕೊಳ್ಳಲಾಗಿದೆ.

**೨. ವಿಷ್ಣುವಿನ ಕೂರ್ಮಾವತಾರ (ಚಿತ್ರಸಂಖ್ಯೆ ೨)**

ಈ ಎರಡನೆಯ ಅವತಾರವು ಸಹ ಒಂದೇ ಪಟ್ಟಿಕೆಯಲ್ಲಿ ರಚನೆಯಾಗಿದ್ದು ಇದು ಕೂರ್ಮಾ ಅವತಾರವಾಗಿದೆ. ಇಲಿಯೂ ಸಹ ವಿಷ್ಣುವಿನ ಮೈಬಣ್ಣವಾಗಿ ತಿಳಿನೀಲಿಯನ್ನು ಬಳೆಯಲಾಗಿದೆ. ನಾಲ್ಕುಕೈಗಳನ್ನು ಹೊಂದಿದ ವಿಷ್ಣುವಿನ ಚಿತ್ರದ ಕಾಗದಕಿತ್ತೂ ಹೋಗಿರುವುದರಿಂದ ಮೂರೆಕೈಗಳು ಮಾತ್ರ ಇಲ್ಲಿ ಕಂಡುಬರುತ್ತೇವೆ.

ಮತ್ಸ್ಯಾವತಾರದಲ್ಲಿ ರಚನೆಯಾದ ಹಾಗೆ ಇಲ್ಲಿಯೂ ಸಹ ಕಿರೀಟ, ಆಭರಣಗಳು, ಆಯುಧ, ಕೆಂಪು ವಸ್ತ್ರ, ಎಲೆ ಹೂಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಮುಖ್ಯವಾಗಿ ಇಲ್ಲಿ ಸೊಂಟದ ಕೆಳಭಾಗದಿಂದ ರಚನೆಯಾದ ಭಾಗವು ಆಮೆಯ ರೂಪಪಡೆದಿದೆ. ಇದೂ ಸಹ ಮೇಲಿನ ಹಾಗೇ ರೇಖಾ ಪ್ರಧಾನವಾಗಿದೆ. ಈ ಎರಡೂ ಅವತಾರಗಳು ಒಂದೇ ಪಟ್ಟಿಕೆಯಲ್ಲಿದ್ದುದು ಕಂಡುಬರುತ್ತವೆ. ವರ್ಣಗಳಲ್ಲಿ ಪ್ರಖರತೆ ಇದ್ದು ಸಂಯೋಜನೆಯಲ್ಲಿ ತನ್ನತವನ್ನು ಇಲ್ಲಿಯೂ ಮುಂದುವರಿಸಿದ್ದಾನೆ.

**೩. ವಿಷ್ಣುವಿನ ವರಾಹವತಾರ (ಚಿತ್ರ ಸಂಖ್ಯೆ ೩)**

ಮೂರನೆಯ ಅವತಾರವಾಗಿ ವಿಷ್ಣು ವರಾಹ ಅವತಾರ ತಾಳಿರುವುದನ್ನು ಇಲ್ಲಿಯೂ ಸಹ ಒಂದೇ ಪಟ್ಟಿಕೆಯಲ್ಲಿ ವರಾಹ ಅವತಾರ ಮತ್ತು ನರಸಿಂಹ ಅವತಾರದ ಚಿತ್ರಗಳ ಮೂಡಿಬಂದಿವೆ. ಇದರಲ್ಲಿ ಮೊದಲನೆಯದಾಗಿ ವರಾಹ ಅವತಾರವಾಗಿದ್ದು ಇಲ್ಲಿ ವಿಷ್ಣು ನಾಲ್ಕು ಕೈಗಳನ್ನು ಹೊಂದಿದ್ದು ಮೈ ಬಣ್ಣವನ್ನು ತೆಳು ನೀಲಿಯಿಂದ ಬಳೆಯಲಾಗಿದೆ. ಹಿಂದಿನ ಎರಡು ಅವತಾರದ ಹಾಗೆ ಇಲ್ಲಿಯೂ ಸಹ ಕಿರೀಟ, ಆಯುಧ, ಕೆಂಪುವಸ್ತ್ರ, ಆಭರಣಗಳು, ಗಿಡ, ಎಲೆ, ಹೂಗಳು, ರಚನೆಯಾಗಿವೆ. ಇಲ್ಲಿ ವಿಷ್ಣುವಿನ ಮುಖವು ವರಾಹ ರೂಪ ಪಡೆದಿದ್ದು ಅಲ್ಲದೇ ಎಡಕ್ಕೆ ಮುಖಮಾಡಿನಿಂತ ವಿನ್ಯಾಸದ ಚಿತ್ರವಾಗಿದೆ. ಚಿತ್ರವಾಗಿದೆ. ಇಲ್ಲಿ ಹಳದಿ ಪಂಚೆ ತೊಟ್ಟ ವಿಷ್ಣುವಿನ ಕಾಲಲ್ಲಿಯ ಬಣ್ಣದ ವಿನ್ಯಾಸದ ಲೇಪನ ಬದಲಾವಣೆ ಕಂಡುಬರುತ್ತದೆ. ಆದರೆ ಚಿತ್ರಕ್ಕೆ ಯಾವ ತೊಂದರೆಯಾಗಿಲ್ಲ. ಈ ಚಿತ್ರಗಳಲ್ಲಿ ಹೂಗಳನ್ನು ರಚಿಸಿದಲ್ಲದೆ ದೊಡ್ಡ ದೊಡ್ಡ ಹೂಗಳು ಸಹ ಕಂಡುಬಂದಿವೆ.

**೪. ವಿಷ್ಣುವಿನ ನರಸಿಂಹಾವತಾರ (ಚಿತ್ರ ಸಂಖ್ಯೆ ೩)**

ನಾಲ್ಕನೆಯ ಅವತಾರವಾಗಿ ವಿಷ್ಣು ನರಸಿಂಹ ಅವತಾರ ತಾಳಿದನು ಇಲ್ಲಿ ಸಿಂಹ ಮುಖಹೊಂದಿದ ವಿಷ್ಣುವಿನ ಕ್ರೂರ ಭಾವನೆಗಳು ಮೂಡಿಸುವ ಹಾಗೆ ಚಿತ್ರಿಣವಾಗಿದೆ. ನಾಲ್ಕು ಕೈಗಳನ್ನು ಹೊಂದಿದ ವಿಷ್ಣು ಮೇಲಿನ ಎರಡು ಕೈಗಳಲ್ಲಿ ಆಯುಧಗಳನ್ನು ಹಿಡಿದಿದ್ದಾನೆ. ಬಲಗೈಯು ಅಭಯ ಹಸ್ತವಾಗಿದೆ. ಎಡಗೈಯು ಸ್ವಲ್ಪ ಡೊಂಕಿಸಿ ಮುಂಚಾಚಿಕೊಂಡಿದೆ. ಇಲ್ಲಿ ವೃತ್ತಕಾರದ ಕಣ್ಣುಗಳು ಹಲ್ಲುಗಳನ್ನು ಸಂದರ್ಭಕ್ಕೆ ತಕ್ಕಂತೆ ಚಿತ್ರಿಸಲಾಗಿದೆ. ಕೇಶವು ರೇಖೆಯಿಂದ ಕೂಡಿದ್ದು ಕಿರೀಟಧಾರಿಯಾದ ನರಸಿಂಹನು ಹಲವಾರು ಆಭರಣ ಧಾರಿಯಾಗಿದ್ದಾನೆ. ಹಳದಿ ಪಂಚೆಯೂಟ್ಟು ಎರಡೂ ಕಾಲು ಡೊಂಕಿಸಿ ಕುಳಿತಿರುವ ಚಿತ್ರವಾಗಿದೆ. ಈ ಎರಡು ಚಿತ್ರಗಳ ಹಿನ್ನಲೆ ಲೇಪನ ತಳು ಹಳದಿ ವರ್ಣದ್ದಾಗಿದೆ. ಸೌಮ್ಯವರ್ಣಗಳು ಇಲ್ಲಿ ಪ್ರಧಾನವಾಗಿದ್ದರೂ ಪ್ರಖರವಾದ ಛಾಯೆಯನ್ನು ಕೊಡುವ ಸಲುವಾಗಿ ಅಲ್ಲಲ್ಲಿ ಪ್ರಾಥಮಿಕ, ದ್ವಿತಿಯ ತರಗತಿಯ ವರ್ಣಗಳನ್ನು ಸಂದರ್ಭಕ್ಕೆ ತಕ್ಕಂತೆ ಬಳಸಿಕೊಂಡು ಕಲಾತ್ಮಕತೆಯಿಂದ ಇಲ್ಲಿ ಚಿತ್ರವಿನ್ಯಾಸ ಗೊಳಿಸಲಾಗಿದೆ.

**೫. ವಿಷ್ಣುವಿನ ವಾಮನ ಅವತಾರ (ಚಿತ್ರ ಸಂಖ್ಯೆ ೪)**

ಐದನೆಯದಾಗಿ ವಾಮನ ಅವತಾರತಾಳಿದ ವಿಷ್ಣು, ಬಾಲಕನ ರೂಪದಲ್ಲಿ ಬಂದು ಕೇಳಿದ ವರವನ್ನು ಕೋಡುವ ಬಲಿಚಕ್ರವರ್ತಿಯ ಗರ್ವವನ್ನು ಮುರಿಯಲು ಬಲಿಚಕ್ರವರ್ತಿಗೆ ಕೇವಲ ಮೂರುಪಾದ



ಜಾಗಕೊಡು ಎಂದು ಕೇಳಿದ ವಾಮನ ಒಂದು ಕಾಲು ಆಕಾಶಕ್ಕೆ ಮತ್ತೊಂದು ಕಾಲು ಭೂಮಿಗೆ ಇಡುತ್ತಾನೆ. ಇಲ್ಲಿ ವಾಮವಿಗೆ-ಮೈಬಣ್ಣವಾಗಿ ನೀಲಿಬಳೆಯಲಾಗಿದೆ. ತೆಳುಗುಲಾಬಿ ವರ್ಣದ ಪಂಚೆಯೊಂದಿಗೆ ಹಳದಿ ಛತ್ರಿ, ಕಮಂಡ ಹಿಡಿದಿದ್ದಾನೆ. ಆಭರಣಧಾರಿಯಾದ ವಾಮನ ಕಾಲುಗಳು ಅಸ್ಪಷ್ಟವಾಗಿ ಕಾಣಬರುತ್ತವೆ. ಇಲ್ಲಿ ವಾಮನನ ಕಣ್ಣು ಮೀನಿನ ಹಾಗೆ ರಚನೆಯಾಗಿದ್ದು ಕಿವಿಯಲ್ಲಿಯ ಓಲೆಯೂ ಬೃಹದ್ಾಕಾರವಾಗಿದೆ. ಈ ವಾಮನನ ಅಕ್ಕ ಪಕ್ಕದಲ್ಲಿ ಗಿಡದ ಟೊಂಗೆಗಳನ್ನು ಸೃಷ್ಟಿಸಿ ದಟ್ಟಹಸಿರು ಎಲೆ, ಕೆಂಪು ಹೂಗಳು ಒಟ್ಟು ಚಿತ್ರಕ್ಕೆ ಪೂರಕವಾಗಿ ಬಂದು ಚಿತ್ರಕ್ಕೆ ಒಂದು ವಿಶಿಷ್ಟ ರೂಪವನ್ನು ನೀಡಿದೆ. ಸಂಯೋಜನೆ, ವರ್ಣಗಾರಿಕೆ, ರೇಖಾಲಾಲಿತ್ಯಗಳ ಹಿತಮಿತ ಸಂಬಂಧದಿಂದ ಚಿತ್ರ ವಿನ್ಯಾಸಗೊಂಡಿದೆ.

**೬. ವಿಷ್ಣುವಿನ ಪರಶುರಾಮನ ಅವತಾರ ( ಚಿತ್ರ ಸಂಖ್ಯೆ ೫)**

ಆರನೆಯ ಅವತಾರವಾಗಿ ವಿಷ್ಣು ಪರಶುರಾಮನಾಗಿ ಪರಿವರ್ತನೆಗೊಂಡ. ಇಲ್ಲಿ ಪರಶುರಾಮನ ಕೈಯಲ್ಲಿ ಕೊಡಲಿಯನ್ನು ಹಿಂಭಾಗದಲ್ಲಿ ಬಿಲ್ಲಿನ ಹಾಗೆ ಬಾಗಿದ ಕೊಲನ್ನು ರಚಿಸಿ ಚಿತ್ರಕ್ಕೆ ಸಮತೋಲನವನ್ನು ತರಲಾಗಿದೆ. ಕಿರೀಟಾಭರಣಧಾರಿಯಾದ ಪರಶುರಾಮ ಗಿಳಿಹಸಿರು ವಸ್ತ್ರವನ್ನು ತನ್ನ ಶರೀರದ ಎಲ್ಲಾ ಭಾಗದಲ್ಲಿ ನಡುವಿನಿಂದ ಮೇಲೆ ಹೋಗಿ ಮತ್ತೆ ಕೆಳಗೆ ಇಳಿಬಿದ್ದಿರುವುದು ಕಂಡು ಬರುತ್ತದೆ. ಹಳದಿ ಪಂಚೆಯೊಂದಿಗೆ ಎಡಗಾಲನ್ನು ಭಾಗಿಸಿ ನಿಂತಿರುವ ಚಿತ್ರವಿಲ್ಲಿದೆ. ಇಲ್ಲಿ ಪರಶುರಾಮನ ಮೂಗು ಚೂಪಾಗಿ ಚಿತ್ರಿಸಿದ್ದು ಕಣ್ಣು ಮೀನಿನ ಹಾಗೆ ಗೋಚರಿಸುತ್ತೇವೆ. ಅಕ್ಕ ಪಕ್ಕದಲ್ಲಿ ಗಿಡದ ಟೊಂಗೆಯನ್ನು ರಚಿಸಿದ್ದು ದಟ್ಟ ಹಸಿರು ಎಲೆಗಳು ಮತ್ತು ಕೆಂಪು ಬಣ್ಣದ ಹೂಗಳನ್ನು ಅಲ್ಲಲ್ಲಿ ರಚಿಸಿ ಚಿತ್ರದ ವಿನ್ಯಾಸವನ್ನು ಕಲಾತ್ಮಕಗೊಳಿಸಲಾಗಿದೆ. ಇಲ್ಲಿಯೂ ಸಹ ಕಾಗದವೂ ಕಿತ್ತುಬರುವುದು ಕಂಡುಬರುತ್ತದೆ. ಇಲ್ಲಿ ಚಿತ್ರಲಕ್ಷಣಗಳಾದ ಷಡಂಗಗಳನ್ನು ಅನುಸರಿಸಲಾಗಿದೆ. ಅದರಲ್ಲಿ ಸಮತೋಲನದ ತತ್ವವು ಇಲ್ಲಿ ಬಳಕೆಯಾಗಿದೆ.

**೭. ವಿಷ್ಣುವಿನ ರಾಮಾವತಾರ (ಚಿತ್ರ ಸಂಖ್ಯೆ ೬)**

ಏಳನೆಯ ಅವತಾರವಾಗಿ ವಿಷ್ಣು ರಾಮಾ ಅವತಾರ ತಾಳುತ್ತಾನೆ. ಇಲ್ಲಿ ರಾಮನ ಚಿತ್ರ ರಚನೆಯಾಗಿದ್ದು ನೀಲಿಮೈಬಣ್ಣ ಹೊಂದಲಾಗಿದೆ. ಆಭರಣ ಕಿರೀಟಧಾರಿಯಾದ ರಾಮನಿಗೆ ಹಣೆಯ ನಾಮವಾಗಿ ಬಿಳಿ ಮಿಶ್ರಿತ ಹಳದಿ ಬಣ್ಣ ಬಳಸಲಾಗಿದೆ. ಮೀನಿನಾಕಾರದ ಕಣ್ಣುಗಳು ಬಾಗಿದ ಹುಬ್ಬು ಕೆಂಪು ತುಟಿ ಹಳದಿ ಪಂಚೆಧರಿಸಿದ್ದಾನೆ. ಎಡಿಗೈಯಲ್ಲಿ ಬಿಲ್ಲು ಹಿಡಿದು ಬಲಗೈಯಲ್ಲಿ ಭಾಣಹಿಡಿದಿರುವ ಹಾಗೆ ಕಂಡುಬರುತ್ತದೆ. ಇಲ್ಲಿ ರಾಮನು ಗಿಡದ ಟೊಂಗೆಯ ಮದ್ಯನಿಂತಿದ್ದು ತ್ರಿಭಂಗಿಯಲ್ಲಿ ನಿಂತಿರುವ ಭಂಗಿಯಲ್ಲಿದೆ. ಗಿಡದ ಟೊಂಗೆಗೆ ದಟ್ಟ ಹಸಿರು ವರ್ಣ ಬಳಸಿದ್ದು ಮತ್ತು ಹೂಗಳನ್ನು ಕೆಂಪು ವರ್ಣದಿಂದ ಚಿತ್ರಿಸಲಾಗಿದೆ. ನಗುಮುಖದಲ್ಲಿ ಕಂಡುಬರುವ ಈ ರಾಮನ ಚಿತ್ರವು ಬಿಳಿಮಿಶ್ರಿತ ಹಳದಿ ಹಿನ್ನೆಲೆಯಲ್ಲಿ ರಚಿಸಿಲಾಗಿದೆ. ಚಿತ್ರದ ಸಂದರ್ಭಕ್ಕೆ ತಕ್ಕಂತೆ ಸನ್ನಿವೇಶವನ್ನು ಇಲ್ಲಿ ಸಂಯೋಜನೆಗೊಳಿಸಲಾಗಿದೆ. ವರ್ಣಗಳ ಬಳಕೆ ಸಮತೋಲನದಿಂದ ಕೂಡಿದ್ದು ಚಿತ್ರಕ್ಕೆ ವಿನ್ಯಾಸ, ಯಥಾದರ್ಶನದ ಹಿನ್ನೆಲೆಯಲ್ಲಿ ಚಿತ್ರಿತವಾಗಿದೆ.

**೮. ವಿಷ್ಣುವಿನ ಕೃಷ್ಣಾವತಾರ (ಚಿತ್ರ ಸಂಖ್ಯೆ ೭)**



ಇಲ್ಲಿ ಕೃಷ್ಣನು ಚಿಕ್ಕ ಬಾಲಕನಾಗಿದ್ದು ಸುಂದರ ವಿನ್ಯಾಸದ ಕಿರೀಟ ಧರಿಸಿದ್ದಾನೆ. ಕೈ, ಕಾಲುಗಳಲ್ಲಿ ಮತ್ತು ಕೊರಳಲ್ಲಿ ಆಭರಣಗಳು ಕಂಡುಬರುತ್ತವೆ. ಹಾಗೆ ಕಿವಿಯಲ್ಲಿಯೂ ಸಹ ರಿಂಗಿನಾಕಾರದ ಕಿವಿಯೋಲೆಯು ಕಂಡುಬರುತ್ತದೆ. ಕೃಷ್ಣನು ಒಂದು ಕಾಲು ಮುಂದೆ ಒಂದು ಕಾಲು ಹಿಂದೆ ಇಟ್ಟು ಬಲಗೈಯನ್ನು ನೆಲಕ್ಕೆ ಊರಿ ಎಡಗೈಯಲ್ಲಿ ಲಾಡು ಹಿಡಿದಿರುವ ಹಾಗೆ ಮೂಡಿಬಂದಿದೆ. ಈ ಕೃಷ್ಣನು ಬೃಹತ್ತಾದ ಕಂಭಗಳುಳ್ಳ ಮಂಟಪದ ಮಧ್ಯದಲ್ಲಿ ಚಿತ್ರಿಸಲ್ಪಟ್ಟಿದ್ದಾನೆ. ಮಂಟಪವು. ತೆಳುಮಿಶ್ರಿತ ಹಳದಿ ವರ್ಣದಿಂದ ಕೂಡಿದೆ. ಕಂಭಗಳಲ್ಲಿ ಕಮಲ ಪುಷ್ಪ, ಹಾಗೂ ದಳದ ಹಾಗೆ ರೇಖಾ ವಿನ್ಯಾಸಗಳು ಮೂಡಿವೆ. ಮೇಲ್ಭಾಗದಲ್ಲಿ ಅಡ್ಡ ಪಟ್ಟಿಕೆಯನ್ನು ರಚಿಸಿ ರೇಖೆಯಿಂದ ಎಲೆಯಾಕಾರ, ಕಮಾನು, ಕಿಡಕಿಗಳಲ್ಲಿ ಚಿಕ್ಕ ಚಿಕ್ಕ ಹೂಗಳನ್ನು ಹಳದಿ ಮಿಶ್ರಿತ ಕಪ್ಪು ವರ್ಣದಿಂದ ರಚಿಸಲಾಗಿದೆ. ಒಟ್ಟಾರೆಯಾಗಿ ಈ ಕಲಾಕೃತಿಯು ದಟ್ಟ ನೀಲಿವರ್ಣದ ಮೇಲೆ ರಚಿಸಲಾಗಿದೆ. ಇಲ್ಲಿ ಕೃಷ್ಣನಿಗೆ ನೇರಳೆವರ್ಣ ಹಾಗೂ ಕಪ್ಪು ನೀಲಿವರ್ಣದಿಂದ ಹೊರರೇಖೆಯನ್ನು ಎಳೆಯಲಾಗಿದೆ.

**೯. ವಿಷ್ಣುವಿನ ಬುದ್ಧಾವತಾರ (ಚಿತ್ರ ಸಂಖ್ಯೆ ೮)**

ಒಂಭತ್ತನೆಯ ಅವತಾರವಾಗಿ ವಿಷ್ಣು ಬೌದ್ಧಾವತಾರ ತಾಳಿದ ಚಿತ್ರವಿಲ್ಲಿದೆ. ಇಲ್ಲಿ ಬುದ್ಧನು ಎದುರು ನೋಟದೊಂದಿಗೆ ಕುಳಿತಿದ್ದು ನೀಲಿ ಮೈಬಣ್ಣಲ್ಲಿ ಚಿತ್ರತವಾಗಿದ್ದಾನೆ. ಕಿರೀಟ ಆಭರಣಧಾರಿಯಾದ ಬುದ್ದನ ಕತ್ತಿನಿಂದ ಕೆಂಪು ವರ್ಣದ' ವಸ್ತ್ರವು ತೊಡೆಯವರೆಗೆ ಇಳಿಬಿದ್ದಿದೆ ಮತ್ತು ಹಳದಿ ವರ್ಣದ ಪಂಚೆಧರಿಸಿದ್ದಾನೆ. ಈ ಪಂಚೆಯಲ್ಲಿ ಕೆಂಪುವರ್ಣದ ರೇಖೆಗಳು ರಚನೆಯಾಗಿವೆ. ಇಲ್ಲಿ ಬುದ್ಧನು ತನ್ನ ಎರಡು ಕೈಗಳನ್ನು ಮುಂದೆಚಾಚಿ ನಗುಮುಖದಲ್ಲಿದ್ದಾನೆ. ಕಣ್ಣುಗಳು ಉದ್ದವಾಗಿ ಮೂಡಿಬಂದು ತುಟಿಗಳಿಗೆ ಕೆಂಪು ಬಣ್ಣ ಬಳೆಯಲಾಗಿದೆ. ಹಣೆಯ ನಾಮವಾಗಿ ಹಳದಿಮಿಶ್ರಿತ ಬಿಳಿ ವರ್ಣ ಉಪಯೋಗಿಸಲಾಗಿದೆ. ಹಾಗೇ ಹೊರರೇಖೆಯಾಗಿ ಕಪ್ಪು ಬಣ್ಣವನ್ನು ಬಳಸಲಾಗಿದೆ. ಬುದ್ಧನ ಅಕ್ಕ ಪಕ್ಕದಲ್ಲಿ ಗಿಡದ ಟೊಂಗೆಯನ್ನು ರಚಿಸಿ ಅದರಲ್ಲಿ ದಟ್ಟ ಹಸಿರು ವರ್ಣದ ಎಲೆಯನ್ನು ಹಾಗೂ ಕೆಂಪು ಹೂಗಳು ಮೂಡಿಬಂದಿವೆ. ಈ ಚಿತ್ರವು ತೆಳು ಹಳದಿ ಲೇಪನದ ಮೇಲೆ ಮೂಡಿಬಂದಿದೆ. ಚಿತ್ರದಲ್ಲಿ ಬಣ್ಣದ ಹಾಸು ಬೀಸುಗಳ ಸಾಂಗತ್ಯವಿದೆ. ಬಣ್ಣದ ಮೇಲಿನ ಹಿಡಿತದಿಂದಾಗಿ ಕಲಾಕೃತಿಗೆ ಹೆಚ್ಚಿನ ಮೌಲ್ಯ ಪ್ರಾಪ್ತವಾಗಿದೆ.

**೧೦. ವಿಷ್ಣುವಿನ ಕಲ್ಕಿ ಅವತಾರ ಮತ್ತು ಬುದ್ಧಾವತಾರ (ಚಿತ್ರ ಸಂಖ್ಯೆ ೯)**

ಇದು ವಿಷ್ಣುವಿನ ಕೊನೆಯ ಅವತಾರವಾಗಿದೆ. ಇಲ್ಲಿ ವಿಷ್ಣು ಮತ್ತು ಬಿಳಿ ಕುದುರೆಯ ರಚನೆಇದೆ. ಅಲ್ಲದೆ ಕುದುರೆಗೆ ಎಡ ಮತ್ತು ಬಲಭಾಗದಲ್ಲಿ ಹಳದಿವರ್ಣದ ರೆಕ್ಕೆಯನ್ನು ರಚಿಸಿದ್ದಾರೆ ಹಾಗೂ ರಥದ ಕಲ್ಪನೆಯ ಹಾಗೇ ಮೇಲ್ಭಾಗದಲ್ಲಿ ಛತ್ರಿಯನ್ನು ರಚಿಸಿ ಹಳದಿ ಬಣ್ಣಬಳೆಯಲಾಗಿದೆ. ಇಲ್ಲಿ ವಿಷ್ಣು ಕೆಳಭಾಗದಲ್ಲಿ ಇದ್ದು ಒಂದುಕಾಲು ಮೇಲಕ್ಕೆ ಎತ್ತಿ ಮತ್ತೊಂದು ಕಾಲು ಕೆಳಕ್ಕೆ ಊರಿದ್ದಾನೆ. ಕಿರೀಟಾಭರಣಧಾರಿಯಾದ ವಿಷ್ಣು ಕುದುರೆಯ ಧಾರವನ್ನು ಜಗ್ಗುತ್ತಿರುವುದು ಕಂಡುಬರುತ್ತದೆ. ಇಲ್ಲಿಯೂ ಸಹ ವಿಷ್ಣುವಿನ ಮೈಬಣ್ಣ ನೀಲಿ ಹಾಗೂ ಹಳದಿ ಪಂಚೆಯನ್ನು ರಚಿಸಿದ್ದಾನೆ. ಬಿಳಿಕುದುರೆಯ ಕಾಲುಗಳಿಗೆ ತೆಳು ನೀಲಿ ಬಣ್ಣ ಉಪಯೋಗಿಸಿದ್ದು ಅಲ್ಲದೇ ಪಕ್ಕದಲ್ಲಿ ಸಹ ಗಿಡದ ಟೊಂಗೆಯನ್ನು ರಚಿಸಿ ದಟ್ಟ ಹಸಿರು ವರ್ಣದಿಂದ ಎಲೆ

ಹೂಗಳನ್ನು ನಿರ್ಮಿಸಿದ್ದಾರೆ. ಈ ಚಿತ್ರದ ಕೆಳಭಾಗದಲ್ಲಿ ಬೌದ್ಧಾವತಾರದ ಚಿತ್ರವಿದ್ದು ಒಂದೆ ಹೇಳಿದ ಚಿತ್ರದ ಹಾಗೇ ರಚನೆಯಾಗಿದೆ. ನೆರಳು ಬೆಳಕನ್ನು ವರ್ಣಛಾಯೆಯಲ್ಲಿ ನಿರೂಪಿಸಲಾಗಿದೆ. ಸಂಯೋಜನೆ ಮತ್ತು ಯಥಾದರ್ಶನದ ಹಿನ್ನಲೆ ಈ ಚಿತ್ರಕ್ಕೆ ಇದೆ. ಒಟ್ಟಾರೆ ಈ ಹತ್ತು ದಶಾವತಾರಗಳಲ್ಲಿ ಗಿಡದ ಟೊಂಗೆಯನ್ನು ಮೂಡಿಸಿರುವುದು ಮತ್ತುಬಿಳಿ ಮಿಶ್ರಿತ ಹಳದಿ ಹಿನ್ನೆಲೆಯ ಮೇಲೆ ಎಲ್ಲ ದಶವತಾರದ ಚಿತ್ರಗಳು ರಚನೆಯಾಗಿವೆ.

ದಶಾವತಾರದ ಎಲ್ಲಾ ಚಿತ್ರಗಳಲ್ಲಿ ವರ್ಣವಿನ್ಯಾಸ ಸಾಂದರ್ಭಿಕವಾಗಿ ಬಳಕೆಯಾಗಿದೆ. ಚಿತ್ರಗಳಲ್ಲಿ ಪ್ರಧಾನ ಪಾತ್ರಕ್ಕೆ ಮೊದಲ ಪ್ರಾಶಸ್ತ್ಯವಿದ್ದು, ನಂತರದ ಪಾತ್ರಗಳು ಪೂರಕವಾಗಿ ಬಳಕೆಗೊಂಡಿವೆ. ಪ್ರಖರತೆಯನ್ನು ಕೃಷ್ಣನ ಅವತಾರದ ಪಾತ್ರಗಳಿಗೆ ನೀಡಲಾಗಿದೆ. ಮತ್ತು ಈ ಚಿತ್ರವನ್ನು ದೊಡ್ಡದಾಗಿ ಚಿತ್ರಿಸಿ ಗಮನ ಸೆಳೆಯುವಂತೆ ಮಾಡಲಾಗಿದೆ.

ವಿಶೇಷವೆಂದರೆ ಚಿತ್ರಕ್ಕೆ ತಕ್ಕದಾದ ಹಿನ್ನಲೆಯನ್ನು ಒದಗಿಸಿರುವುದು ಗಮನಾರ್ಹ, ಚಿತ್ರದ ಸಂಯೋಜನೆಗೆ ತೊಂದರೆಯಾಗದಂತೆ ವರ್ಣವಿನ್ಯಾಸ ನಿಸರ್ಗದ ಇಲ್ಲವೇ ವಸ್ತುವಿನ ವಿನ್ಯಾಸಗಳನ್ನು ತುಂಬಾ ಕಲಾತ್ಮಕತೆಯಿಂದ ಚಿತ್ರಿಸಲಾಗಿದೆ. ಚಿತ್ರಕ್ಕೆ ತಕ್ಕಂತೆ ರಸಿಕತೆಯ ಅಂಶಗಳು ಮನೋಜ್ಞವಾಗಿ ಮೂಡಿಬಂದಿವೆ.

* * *



ಚಿತ್ರ ೧ ಶ್ರೀ ಶೇಷಶಾಹಿ ವಿಷ್ಣು



ಚಿತ್ರ ೨ ವಿಷ್ಣುವಿನ ಮತ್ಸಾವತಾರ (ಮೆಲ್ಬದಿ) ಮತ್ತು ಕೂರ್ಮಾವತಾರ



ಚಿತ್ರ ೩. ವಿಷ್ಣುವಿನ ವರಾಹವತಾರ (ಮೇಲ್ಬದಿ) ಮತ್ತು ನರಸಿಂಹಾವತಾರ



ಚಿತ್ರ ೪ ವಿಷ್ಣುವಿನ ವಾಮನ ಅವತಾರ



ಚಿತ್ರ ೫ ವಿಷ್ಣುವಿನ ಪರಶುರಾಮನ ಅವತಾರ



ಚಿತ್ರ ೬ ವಿಷ್ಣುವಿನ ರಾಮಾವತಾರ



ಚಿತ್ರ ೭ ವಿಷ್ಣುವಿನ ಕೃಷ್ಣಾವತಾರ



ಚಿತ್ರ ೮ ವಿಷ್ಣುವಿನ ಬುದ್ಧಾವತಾರ



ಚಿತ್ರ ೯ ವಿಷ್ಣುವಿನ ಕಲ್ಕಿ ಅವತಾರ (ಮೇಲ್ಬದಿ) ಮತ್ತು ಬುದ್ಧಾವತಾರ



ಅಧ್ಯಾಯ : ನಾಲ್ಕು

## ಸಂತ ಶುಭರಾಯರ ಮಹಾಭಾರತ ಮತ್ತು ರಾಮಾಯಣದ ಚಿತ್ರಕಲಾಕೃತಿಗಳು

ಸಂತ ಶುಭರಾಯ ರಚಿಸಿದ ಕಲಾಕೃತಿಗಳು ವಿಶೇಶವಾಗಿ ಪೌರಾಣಿಕ ಪ್ರಸಂಗಗಳೇ ಆಗಿವೆ. ರಾಮಾಯಣ, ಮಹಾಭಾರತ, ಕೃಷ್ಣಲೀಲೆಯ ಪ್ರಸಂಗಗಳು ಕಲಾವಿದರಿಗೆ ಸ್ಫೂರ್ತಿನೀಡಿದಂತೆ ಶುಭರಾಯರಿಗೆ ಇವು ಅತ್ಯಂತ ಪ್ರೀತಿಯ ವಿಷಯಗಳಾಗಿವೆ. ಶುಭರಾಯರು ತಮ್ಮ ಚಿತ್ರಗಳಿಗೆ ಆರಿಸಿಕೊಂಡ ಪ್ರಸಂಗಗಳಲ್ಲಿ ಹೆಚ್ಚಿನವು ರಾಮಯಣ, ಕೃಷ್ಣಾವತಾರಕ್ಕೆ ಸಂಬಂಧಿಸಿದವುಗಳಾಗಿವೆ. ಸಿಂಹಪಾಲು ಕೃಷ್ಣಾವತಾರದ ಚಿತ್ರಗಳಾಗಿವೆ. ರಾಮಾಯಣಕ್ಕೆ ಸಂಬಂಧಿಸಿದ ಕೇವಲ ಮೂರು ಕಲಾಕೃತಿಗಳು ಮಾತ್ರ ಲಭ್ಯವಾಗಿವೆ. ಪ್ರಕೃತಿಗೆ ಸಂಬಂಧಿಸಿದ ಚಿತ್ರಗಳು ಸಹ ತೀರ ಕಡಿಮೆ. ಶುಭರಾಯರ ಹೆಚ್ಚಿನ ಚಿತ್ರಗಳು ಭಾಗವತ ಪುರಾಣದಲ್ಲಿ ಹೇಳಿರುವ ಕೃಷ್ಣನ ಬ್ರಜಲೀಲೆಗೆ ಸಂಬಂಧಿಸಿದವುಗಳಾಗಿವೆ. ಮಹಾಭಾರತದ ದೃಶ್ಯವನ್ನಾಧರಿಸಿದ ಕೃಷ್ಣಲೀಲೆಯ ಕಲಾಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ೧. ತಾಯಿಯ ಯಶೋಧೆಯ ಜೊತೆ ಕೃಷ್ಣ ಮತ್ತು ಬಲರಾಮ (ಚಿತ್ರ ಸಂ. ೧೦)

ಇಲ್ಲಿ ಯಶೋಧೆಯು ಬಲಗೈಯಿಂದ ಕೃಷ್ಣನ ತಲೆಯ ಮೇಲೆ ಕೈಯಿಟ್ಟು ಎಡಗೈಯಿಂದ ಕೃಷ್ಣನ ಬಲಗೈಯನ್ನು ಹಿಡಿದಿರುವುದು ಕಂಡುಬರುತ್ತದೆ. ಕೃಷ್ಣನ ಪಕ್ಕದಲ್ಲಿ ಬಲರಾಮನ ಚಿತ್ರವು ರಚನೆಯಾಗಿದ್ದು ಇಲ್ಲಿ ಬಲರಾಮನ ಮೈಬಣ್ಣವಾಗಿ ಗೌರವರ್ಣಬಳಿಯಲಾಗಿದೆ. ಕಿರೀಟಾಭರಣಧಾರಿಯಾಗಿದ್ದಾನೆ. ಬಲಗೈಯಿಂದ ಯಾವುದೊ ಸೂಚನೆ ನೀಡುತ್ತಿರುವ ಹಾಗೆ ಕಂಡುಬರುತ್ತದೆ. ಕೃಷ್ಣನನ್ನು ನೀಲಿ ವರ್ಣದಲ್ಲಿ ತೋರಿಸಿದ್ದು, ಆಭರಣಧಾರಿಯಾಗಿದ್ದಾನೆ. ಯಶೋದೆಯು ಕೆಂಪು ಸೀರೆ, ಕುಪ್ಪಸ ತೊಟ್ಟು ಒಂದು ಕಾಲು ಮುಂದಕ್ಕೆ ಇನ್ನೊಂದು ಕಾಲು ಹಿಂದಕ್ಕೆ ಮಾಡಿರುವುದು ಕಂಡುಬರುತ್ತದೆ. ಮೇಲ್ಭಾಗದಲ್ಲಿ ಮತ್ತೊಬ್ಬ ಬಲರಾಮನ ಹಾಗೆ ಮೂಡಿಬಂದಿದ್ದು, ಇವನು ಕುಳಿತುಕೊಂಡೆ ಬಲರಾಮನ ಹಾಗೆ ಕೈಮುಂದೆ ಮಾಡಿದ್ದಾನೆ. ಈ ಚಿತ್ರ ನೋಡುವುದಕ್ಕೆ ಯಾವುದೋ ಆಟದಲ್ಲಿ ತೊಡಗಿದ ಹಾಗೆ ಕಾಣಬರುತ್ತದೆ. ಅಲ್ಲದೆ ಈ ಚಿತ್ರದ ಪಟ್ಟಿಕೆಯಲ್ಲಿ ಆಟದ ಬೇರೆಬೇರೆ ಸನ್ನಿವೇಶಗಳು ರಚನೆಯಾಗಿವೆ. ಇಲ್ಲಿ ಯಶೋಧೆಯು ಕುಳಿತಿದ್ದು, ಕೃಷ್ಣನು ತೊಡೆಯ



ಮೇಲೆ ಕುಳಿತು ಬಲರಾಮನ ಕಡೆ ಕೈಮಾಡಿದ್ದಾನೆ. ಬಲರಾಮನು ಯಶೋದೆಯ ಮುಖವನ್ನು ನೋಡುವುದರೊಂದಿಗೆ ಮುಖಕ್ಕೆ ಕೈಮಾಡಿದ್ದಾನೆ. ಇಲ್ಲಿ ಯಶೋಧೆಯ ಸೀರೆ ತಿಳಿಗುಲಾಬಿ, ಕೆಂಪು ಕುಪ್ಪಸ ಕಂಡುಬಂದಿದೆ. ಕೆಳಭಾಗದಲ್ಲಿ ಯಶೋಧೆಯು ಕೃಷ್ಣನನ್ನು ತನ್ನ ತೊಡೆಯ ಮೇಲೆ ಕೈಯಿಂದ ಎತ್ತಿ ಆಡಿಸುತ್ತಿದ್ದಾಳೆ ಬಲರಾಮನು ಹಿಂದೆ ನಿಂತು ತಾಯಿಯ ಬುಜದ ಮೇಲೆ ಕೈಯಿಟ್ಟು ನಿಂತಿದ್ದಾನೆ. ಕೊನೆಯ ಚಿತ್ರದಲ್ಲಿ ಕೃಷ್ಣನು ಅಪೂರ್ಣವಾಗಿ ಮೂಡಿಬಂದಿದೆ. ಹಿನ್ನೆಲೆ ಲೇಪನವಾಗಿ ತೆಳುಗುಲಾಬಿ ವರ್ಣ ಬಳಸಲಾಗಿದೆ.

**೨. ಯಶೋಧಾ ಮಾತೆ ಜೊತೆ ಕೃಷ್ಣನು ಬೆಣ್ಣೆ ಹಂಚುತ್ತಿರುವುದು (ಚಿತ್ರ ಸಂ. ೧೧)**

ಯಶೋದೆಯ ಆಕೃತಿಯ ಬಹುದೊಡ್ಡ ಗಾತ್ರದಲ್ಲಿ ರಚನೆಯಾಗಿದ್ದು, ಕೃಷ್ಣನು ಚಿಕ್ಕ ಗಾತ್ರದಲ್ಲಿ ಮೂಡಿಬಂದಿರುವ ದೃಶ್ಯ ಇದಾಗಿದೆ. ನೀಲಿಬಣ್ಣದ ಕೃಷ್ಣನು ಆಭರಣಧಾರಿಯಾಗಿದ್ದಾನೆ. ಬಲಗೈಯಲ್ಲಿ ಬೆಣ್ಣೆತುಂಬಿದ ಬಟ್ಟಲನ್ನು ಹಿಡಿದು ಓಡಿ ಬರುತ್ತಿರುವ ಹಾಗೆ ಮೂಡಿಬಂದಿದೆ. ಯಶೋದೆಯು ಇತರರಿಗೆ ಈ ಬೆಣ್ಣೆಯನ್ನು ಹಂಚುತ್ತಿರುವ ಹಾಗೆ ಎಲ್ಲರನ್ನು ಕೂಗಿ ಕರೆಯುತ್ತಿರುವ ದೃಶ್ಯ ಮನ ಮೊಹಕವಾಗಿದೆ. ಯಶೋಧೆತೊಟ್ಟ ಹಳದಿ ಸೀರೆಯಲ್ಲಿ ಕೆಂಪು ರೇಖೆಗಳು ರಚನೆಯಾಗಿವೆ. ಅಲ್ಲದೆ ಇಲ್ಲಿ ಒಂದೇ ಸ್ತನವನ್ನು ದೊಡ್ಡದಾಗಿ ಚಿತ್ರಿಸಿ ಕೆಂಪು ಕುಪ್ಪಸ ತೊಡಿಸಲಾಗಿದೆ. ಆಭರಣಧಾರಿಯಾದ ಇವಳು ಕೊರಳಲ್ಲಿ ಹಳದಿ ಬಣ್ಣದ ಮುತ್ತಿನ ಹಾರವನ್ನು ಧರಿಸಿದ್ದಾಳೆ. ಮೇಲ್ಭಾಗದಲ್ಲಿ ಅಪೂರ್ಣವಾದ ಕೃಷ್ಣ ಮತ್ತು ಯಶೋಧೆಯ ಚಿತ್ರಗಳು ಮೂಡಿವೆ. ಅಖಂಡವಾದ ಪಟ್ಟಿಕೆಯಲ್ಲಿ ತೆಳುಹಳದಿ ಹಿನ್ನಲೆ ಲೇಪನ ಮಾಡಿ ಚಿತ್ರ ಬಿಡಿಸಲಾಗಿದೆ. ಅಲ್ಲಲ್ಲಿ ಖಾಲಿಜಾಗವನ್ನು ಹೂ ಗಿಡಗಳಿಂದ ರಚಿಸಲಾಗಿದೆ. ಗಿಡಕ್ಕೆ ದಟ್ಟಹಸಿರು, ಹೂಗಳಿಗೆ ಕೆಂಪು ಬಿಳಿ ಉಪಯೋಗಿಸಲಾಗಿದೆ. ಕೆಳಭಾಗದಲ್ಲಿಯೂ ಸಹ ಅಪೂರ್ಣವಾಗಿ ಯಶೋದೆಯ ಮುಖ, ಹಾಗೂ ಕೈಯಿಯು ಮೂಡಿಬಂದಿದೆ.

**೩. ರಕ್ಕಸಿ ಪೂತನಿಯನ್ನು ಕೊಲ್ಲುತ್ತಿರುವ ಬಾಲಕೃಷ್ಣ (ಚಿತ್ರ ಸಂ. ೧೨)**

ಭವಿಷ್ಯತ್ತನ್ನು ತಿಳಿದವರು ದೇವಕಿಯ ಮಗನು ಕಂಸನನ್ನು ಕೊಲ್ಲುವನೆಂದು ತಿಳಿಸಿದುರಿಂದ ಅವನು ಶಿಶುಜನನವನ್ನು ತಿಳಿಸುವಂತೆ ಖರನೆಂಬ ರಾಕ್ಷಸನನ್ನು ನೇಮಿಸಿದನು. ಆದರೆ ವಸುದೇವನು ಕಾಲು ಕಟ್ಟಿಕೊಂಡು ಶಿಶುಕೊಂದಂತೆ ಮಾಡಿ ನಂದಗೋಪನ ಮನಗೆ ಬಂದು ಬಿಟ್ಟನು. ಇದನ್ನು ತಿಳಿದ ಕಂಸನು ವಿಷದ ಮೊಲೆಯ ಪೂತನಿಯನ್ನು ಕಳಿಸಿದನು, ಕೃಷ್ಣನು ವಿಷವನ್ನು ಹೀರಿ ಉಗುಳಿದುದಲ್ಲದೆ ಕಂಸನನ್ನು ಕೊಂದನ್ನು ಈ ಚಿತ್ರವು ಇಲ್ಲಿ ಮೂಡಿಬಂದಿದ್ದು, ಇಲ್ಲಿ ಪೂತನಿಯು ಕೆಳಗೆ ಮಲಗಿದ್ದು ಕೃಷ್ಣನು ಅವಳ ಮೊಲೆಯನ್ನು ಕುಡಿಯುತ್ತಿರುವ ಚಿತ್ರವಾಗಿದೆ. ಕೃಷ್ಣನು ಅವಳ ವಿಷವನ್ನು ಹಿರುವುದರೊಂದಿಗೆ ಇಡೀ ದೇಹದ ರಕ್ತವನ್ನೆಲ್ಲ ಹೀರಿ ಸಾಹಿಸಿದನ್ನು ಕಾಣಬಹುದು. ಪೂತನಿಯು ಸ್ತ್ರಿಯರಂತಿದ್ದು, ಕೋರೆಹಲ್ಲನ್ನು ರಚಿಸಲಾಗಿದೆ. ಮನುಷ್ಯರಂತೆ ಮೈಬಣ್ಣಹೊಂದಿದ ಇವಳು ಹಸಿರು ವರ್ಣದ ಕುಪ್ಪಸ ತೊಟ್ಟಿದ್ದಾಳೆ. ಕೃಷ್ಣನು ಅವಳ ಒಂದು ಮೊಲೆಯನ್ನು ಬಾಯಿಯಲ್ಲಿ ಮತ್ತೊಂದನ್ನು ಕೈ ತುದಿಬೆರಳಿನಿಂದ ಮೊಲೆಯ ತೊಟ್ಟನ್ನು ಹಿಡಿದಿರುವುದನ್ನು ಕಾಣಬರುತ್ತದೆ. ಕೃಷ್ಣನು ನೀಲಿ ಮೈಬಣ್ಣಹೊಂದಿ ಆಭರಣಧಾರಿಯಾಗಿದ್ದಾನೆ. ಕೃಷ್ಣನ ಈ ಕಾರ್ಯದಿಂದ ನೊಂದ ಪೂತನಿಯ ಮುಖದಲ್ಲಿ ಅಳುವುದನ್ನು ಕಾಣಬಹುದು. ಹಳದಿ ಸೀರೆಯುಟ್ಟ



ಪೂತನಿಯ ಕೈ ಮೇಲೆ ಕೃಷ್ಣ ಕಾಲನ್ನೂರಿ ಒಂದು ಕಾಲನ್ನು ಹಿಂದೆ ಎತ್ತಿದ್ದಾನೆ. ಕೃಷ್ಣನ ಹಿಂಭಾಗದಲ್ಲಿ ಇಬ್ಬರು ಮಹಿಳೆಯರು ಕೃಷ್ಣನನ್ನು ಜಗುತ್ತಿರುವ ಹಾಗೇ ಅವನ ಹತ್ತಿರ ಬರುತ್ತಿದ್ದಾರೆ. ಈ ಮಹಿಳೆಯರಲ್ಲಿ ಮೊದಲನೆಯವಳು ಕೆಂಪು ಸೀರೆ ಧರಿಸಿದ್ದರೆ, ಹಿಂದಿನವಳು ಹಳದಿಬಣ್ಣದ ಸೀರೆಯುಟ್ಟಿದ್ದಾಳೆ. ಈ ಚಿತ್ರವು ಬಿಳಿವರ್ಣದ ಹಿನ್ನೆಲೆಯಲ್ಲಿ ಮೂಡಿಬಂದಿದೆ.

**೪. ಮಜ್ಜಿಗೆ ಕಡೆಯಲು ತಾಯಿಗೆ ಸಹಕರಿಸುತ್ತಿರುವ ಕೃಷ್ಣ (ಚಿತ್ರ ಸಂ. ೧೩)**

ಇಲ್ಲಿ ಯಶೋಧೆ ಮಜ್ಜಿಗೆ ಕಡೆಯುತ್ತಿರುವುದು ಅಲ್ಲದೆ ತಾಯಿಯೊಂದಿಗೆ ಕೃಷ್ಣನು ಕೋಲನ್ನು ಹಿಡಿದಿರುವುದು ಕಂಡುಬರುತ್ತದೆ. ಯಶೋಧೆಯು ತನ್ನ ಎರಡು ಕೈಯಿಂದ ಹಗ್ಗವನ್ನು ಜಗ್ಗುತ್ತಿರುವಂತೆ ಚಿತ್ರಿಸಲಾಗಿದೆ. ಕೃಷ್ಣನು ನೀಲಿಮೈಬಣ್ಣ ಹೊಂದಿದ್ದು, ಆಭರಣಧಾರಿಯಾಗಿದ್ದಾನೆ. ಕೃಷ್ಣನ ಕಾಲುಗಳು ಕಾಗದತ್ತಿರುವುದರಿಂದ ಅಪೂರ್ಣವಾಗಿ ಕಂಡುಬಂದಿವೆ. ಯಶೋದೆಯು ಹಳದಿ ಸೀರೆ ತಿಳಿಗುಲಾಬಿ ಕುಪ್ಪಸ ತೊಟ್ಟಿರುವುದು ಮಾತ್ರವಲ್ಲದೆ ಅದರಲ್ಲಿ ಚುಕ್ಕೆಗಳನ್ನು ಬಿಡಿಸಲಾಗಿದೆ. ಯಶೋದೆ ಹಾಗೂ ಕೃಷ್ಣನ ಮಧ್ಯದಲ್ಲಿರುವ ಮಡಕೆಯು ವಿಶಿಷ್ಟ ವಿನ್ಯಾಸದಿಂದ ಕೂಡಿದ್ದು ಮಧ್ಯದಲ್ಲಿ ಕೆಂಪುವರ್ಣದ ಕೋಲನ್ನು ರಚಿಸಿ ಅದಕ್ಕೆ ಹಗ್ಗದ ಸಹಾಯದಿಂದ ತಿರುಗಿಸಲಾಗುವ ವಿಧಾನ ಇದಾಗಿದೆ. ಇಲ್ಲಿ ಕೃಷ್ಣನು ತಾಯಿಯೊಂದಿಗೆ ಸಹಾಯ ಮಾಡುತ್ತಿರುವ ಹಾಗಿದೆ. ಈ ಚಿತ್ರವು ತೆಳು ಹಳದಿ ಕಾಗದದ ಮೇಲೆ ರಚನೆಯಾಗಿದೆ. ಇಲ್ಲಿ ಯಶೋಧೆಯ ಒಂದೇ ಸ್ತನವು ಕಂಡುಬಂದು ಕಿವಿಕೊರಳಾಭರಣರದಿಂದ ಬಿಳಿದಾದ ಮುತ್ತಿನ ಸರವು ಸೊಂಟದ ಕೆಳಭಾಗದವರೆಗೂ ಕಂಡುಬಂದಿದೆ.

**೫. ತಾಯಿಯ ಜೊತೆ ಕುಳಿತಿರುವ ಕೃಷ್ಣನಹತ್ತಿರ ಹೋಗುತ್ತಿರುವ ಗೋಪಿಕೆಯರು (ಚಿತ್ರ ಸಂ. ೧೪)**

ಇಲ್ಲಿ ಕೃಷ್ಣನ ತಾಯಿ ಯಶೋಧೆಯು ಕೃಷ್ಣನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡಿದ್ದಾಳೆ. ಯಶೋಧೆಯು ಹಳದಿ ಮೈಬಣ್ಣಹೊಂದಿದ್ದು ತೆಳುಗುಲಾಬಿ ವರ್ಣದ ಸೀರೆಯನ್ನು ತೊಟ್ಟಿದ್ದಾಳೆ. ವೃತ್ತಾಕಾರದ ಸ್ತನಗಳು ಇಲ್ಲಿ ಮೂಡಿರುವುದಲ್ಲದೆ ಹಲವಾರು ಆಭರಣಧಾರಿಯಾಗಿದ್ದಾಳೆ. ಕೃಷ್ಣನು ತೊಡೆಯ ಮೇಲೆ ಕುಳಿತು. ಹಳದಿ ವರ್ಣದ ಪಂಚೆ ನೀಲಿಮೈಬಣ್ಣಹೊಂದಿದ್ದಾನೆ. ಇವರ ಹಿಂಭಾಗದಲ್ಲಿ ಮೂವರು ಗೋಪಿಕಾ ಸ್ತ್ರೀಯರನ್ನು ಚಿತ್ರಿಸಿದ್ದು, ಈಚಿತ್ರದ ಸ್ತ್ರೀಯರ ಭಂಗಿಯು ಒಂದೇ ರೀತಿಯಾಗಿದೆ. ಕೆಂಪುಕುಪ್ಪಸ, ಬಿಳಿಸೀರೆ, ಹಳದಿ ಕುಪ್ಪಸ, ಹಳದಿ ಸೀರೆ, ತೆಳುನೀಲಿ ಕುಪ್ಪಸ ಕೆಂಪು ಸೀರೆ ತೊಟ್ಟಿರುವುದು ಸಾಮಾನ್ಯವಾಗಿ ಕಂಡುಬಂದಿದೆ. ಇಲ್ಲಿ ಎಲ್ಲರ ಸೀರೆ ಹಾಗೂ ಕುಪ್ಪಸವಲ್ಲಿ ರೇಖೆಗಳು ಚುಕ್ಕೆಗಳು ಮೂಡಿಬಂದಿವೆ. ಸಾಲಾಗಿ ರಚನೆಯಾದ ಈ ಚಿತ್ರಗಳ ಹಿನ್ನೆಲೆಯಲ್ಲಿ ನೀಲಿ ಬಣ್ಣಬಳಿದು ಚಿತ್ರಗಳನ್ನು ರೂಪಿಸಲಾಗಿದೆ.

**೬. ಕೃಷ್ಣನನ್ನು ಶಿಕ್ಷಿಸುತ್ತಿರುವ ಯಶೋಧೆ ಮತ್ತು ಗೋಪಿಕೆಯರು (ಚಿತ್ರ ಸಂ. ೧೫)**

ಕೃಷ್ಣನ ತುಂಟಕ್ಕೆ ತಾಯಿಯು ಶಿಕ್ಷೆ ನೀಡುತ್ತಿರುವುದನ್ನು ಚಿತ್ರದಲ್ಲಿ ಕಾಣಬಹುದಾಗಿದೆ. ಕೃಷ್ಣನ ಸೊಂಟಕ್ಕೆ ನಡುಪಟ್ಟಿಯಂತಹ ಪಟ್ಟಿಯನ್ನು ಕಟ್ಟುತ್ತಿರುವದು ಕಂಡುಬಂದಿದೆ. ಇಲ್ಲಿ ಬಾಲಕೃಷ್ಣ ತಾಯಿಯಿಂದ ತಪ್ಪಿಸಿಕೊಳ್ಳಲು ಓಡುತ್ತಿರುವ ಭಂಗಿಯಲ್ಲಿ ಮೂಡಿಬಂದಿದೆ. ನೀಲಿ ಮೈಬಣ್ಣಹೊಂದಿದ ಕೃಷ್ಣನು



ಕಿರೀಟಾಭರಣಧಾರಿಯಾಗಿದ್ದಾನೆ. ತಾಯಿ ಯಶೋಧೆಯು ಕೆಂಪು ಸೀರೆ, ಹಸಿರು ಕುಪ್ಪಸ ತೊಟ್ಟಿದ್ದಾಳೆ. ಉಳಿದ ಗೋಪಿಕಾ ಸ್ತ್ರೀಯರು ಯಶೋಧೆಗೆ ಸಹಾಯ ಮಾಡುತ್ತಿರುವ ಹಾಗೆ ಮೂಡಿಬಂದಿದ್ದಾರೆ. ಇಲ್ಲಿ ಗೋಪಿಕಾ ಸ್ತ್ರೀಯರ ವಸ್ತ್ರವಿನ್ಯಾಸಗಳು ಸಾಮಾನ್ಯವಾಗಿ ಚುಕ್ಕಿಗಳುಳ್ಳ ಹಸಿರು, ಹಳದಿ, ಕೆಂಪು, ಸೀರೆ ಕುಪ್ಪಸವನ್ನು ತೊಟ್ಟಿದ್ದಾರೆ. ಎದುರುಬದರು ನಿಂತು ಮೇಲಕ್ಕೆ ನೋಡುತ್ತಿರುವ ಸ್ತ್ರೀಯರು ಕೈಯಲ್ಲಿ ಕೃಷ್ಣನ ನಡುಪಟ್ಟಿಯನ್ನು ಹಿಡಿದಿದ್ದಾರೆ. ಈ ಇಲ್ಲ ಗೋಪಿಕಾ ಸ್ತ್ರೀಯರು ಆಭರಣಧಾರಿಯಾಗಿದ್ದು, ಹಳದಿವರ್ಣದ ಹಿನ್ನಲೆಯಲ್ಲಿ ಈ ಚಿತ್ರ ಮೂಡಿಬಂದಿದೆ.

**೭. ಕೃಷ್ಣ ಮತ್ತು ಕುಬೇರ (ಚಿತ್ರ ಸಂ. ೧೬)**

ಇಲ್ಲಿ ಕೃಷ್ಣನನ್ನು ಮರಕ್ಕೆಕಟ್ಟಿರುವ ಹಾಗೆ ಈ ಚಿತ್ರ ಮೂಡಿ ಬಂದಿದೆ. ಬೃಹತ್ತಾದ ಹಸಿರು ಮರಗಳು ರಚನೆಯಾಗಿದ್ದು ಮೇಲ್ಭಾಗದಲ್ಲಿ ಕುಬೇರನನ್ನು ಚಿತ್ರಿಸಲಾಗಿದೆ. ಕೃಷ್ಣ ಹಾಗೂ ಕುಬೇರರು ಕಿರೀಟಾಭರಣಧಾರಿಯಾಗಿ ಮೂಡಿಬಂದಿದ್ದಾರೆ. ಕುಬೇರರು ಕೆಂಪು ವಸ್ತ್ರ ಹಾಗೂ ಹಳದಿ ಪಂಚೆತೊಟ್ಟು ಮರದ ಕಾಂಡಕ್ಕೆ ಕಟ್ಟಿರೋಹಾಗೆ ಇಬ್ಬರು ಕೈ ಮುಗಿದಿರುವುದು ಕಂಡುಬಂದಿದೆ. ಕೃಷ್ಣನು ಅಪೂರ್ಣವಾಗಿದ್ದು ಬಲಗಡೆಗೆ ತಿರುಗಿ ನೋಡುವ ಹಾಗೆ ಮೂಡಿಬಂದಿದೆ. ಮರದಲ್ಲಿ ಸಾಂಪ್ರದಾಯಿಕ ಚಿತ್ರಕಲೆಯಲ್ಲಿ ರಚಿಸುವಮತೆ ಚಿಕ್ಕ ಗಾತ್ರದ ಎಲೆಗಳು ರಚನೆಯಾಗಿದ್ದು ಕಂಡುಬಂದಿವೆ. ಈ ಚಿತ್ರದ ಮೇಲ್ಭಾಗದಲ್ಲಿ ಮಂಟಪವು ಕಂಪುವರ್ಣದಲ್ಲಿ ರಚನೆಯಾಗಿದೆ. ಇಲ್ಲಿ ಹಳದಿ ವರ್ಣದ ರೇಖೆಗಳು ಚುಕ್ಕೆಗಳು ಮೂಡಿವೆ. ಅಲ್ಲದೆ ಅಕ್ಕಪಕ್ಕದಲ್ಲಿ ಬಾಳೆಯ ಗಿಡದ ಎಲೆಯಹಾಗೆ ಹಳದಿ ವರ್ಣದ ಎಲೆಗಳು ಮೂಡಿವೆ. ಈ ಎಲ್ಲಾ ಚಿತ್ರಗಳ ಹಿನ್ನೆಲೆಯಲ್ಲಿ ತಳು ಹಳದಿ ವರ್ಣವನ್ನು ಉಪಯೋಗಿಸಲಾಗಿದೆ.

**೮. ಯಮುನಾ ನದಿತೀರದಲ್ಲಿ ತನ್ನ ಸ್ನೇಹಿತರೊಡನೆ ಚಂಡನ್ನಾಡುತ್ತಿರುವ ಕೃಷ್ಣ (ಚಿತ್ರ ಸಂ. ೧೭)**

ಕೃಷ್ಣನು ಕೈಯಲ್ಲಿ ಚಂಡನ್ನು ಹಿಡಿದು ಜೊತೆಗಾರನ ಬೆನ್ನ ಮೇಲೆ ಕುಳಿತು ಚಂಡನ್ನು ತೂರುತ್ತಿರುವುದಲ್ಲದೇ ಜೊತೆಗಾರರು ಚಂಡನ್ನು ಹಿಡಿಯುವುದಕ್ಕೆ ಸಾಲಾಗಿ ಓಡಿಬರುವುದು ಇಲ್ಲಿ ಕಂಡುಬಂದಿದೆ. ಜೊತೆಗಾರರಲ್ಲಿ ಇಬ್ಬರ ಮೈಬಣ್ಣ ತೆಳುಗುಲಾಬಿಯಾದರೆ, ಮತ್ತಿಬ್ಬರ ಬಣ್ಣ ಹಳದಿಯಾಗಿದೆ. ಕೃಷ್ಣನು ಮಾತ್ರ ತೆಳು ನೀಲಿವರ್ಣದಲ್ಲಿ ಮೂಡಿಬಂದಿದ್ದಾನೆ. ಅಲ್ಲದೆ ಹಳದಿ ಪಂಚೆ ಹಳದಿ ಕಿರೀಟಾಭರಣಧಾರಿಯಾಗಿದ್ದಾನೆ. ಜೊತೆಗಾರರು ಸಾಮಾನ್ಯವಾಗಿ ಕೆಂಪು ಪಂಚೆ, ಕೆಂಪು ಪೇಟಾ, ಧರಿಸಿದ್ದಾರೆ. ಕೆಳಭಾಗದಲ್ಲಿ ಗೋವುಗಳನ್ನು ಸಾಲಾಗಿ ಚಿತ್ರಿಸಲಾಗಿದೆ. ಕೃಷ್ಣನ ಪಕ್ಕದಲ್ಲಿಯ ಗೋವು ಮೇಲ್ಮುಖಮಾಡಿ ಕುಳಿತ್ತಿದ್ದು ಕಂಡುಬಂದಿದೆ. ಚಿತ್ರದ ಮೇಲ್ಭಾಗದಲ್ಲಿ ಬಲಗಡೆ ರಚನೆಯಾದ ಗೋವುಸಹ ಮೇಲ್ಮುಖಮಾಡಿ ಕುಳಿತಿದೆ. ಅಲ್ಲಲ್ಲಿ ಹಸಿರು ಮಿಶ್ರಿತ ಹಳದಿ ಹೂ, ಗಿಡಗಳು ರಚನೆಯಾಗಿವೆ.

**೯. ಕೃಷ್ಣನ ದನಗಾಹಿ ಬಾಲ್ಯ ಸ್ನೇಹಿತರು (ಚಿತ್ರ ಸಂ. ೧೮)**

ಕೃಷ್ಣನ ಬಾಲ್ಯ ಸ್ನೇಹಿತರಾದ ಗೊಲ್ಲರ ಚಿತ್ರಗಳು ಇಲ್ಲಿ ರಚನೆಯಾಗಿವೆ. ಈ ಚಿತ್ರಗಳು ಸಾಲಾಗಿ ರಚನೆಯಾಗಿ ಎಲ್ಲರ ಮೈಬಣ್ಣ ಹಳದಿ ಮಿಶ್ರಿತ ಬಿಳಿವರ್ಣದಿಂದ ಕೂಡಿದೆ. ಅಲ್ಲದೆ ಎಲ್ಲರ ವಸ್ತ್ರವಿನ್ಯಾಸಗಳು



ಒಂದೇ ರೀತಿಯಾಗಿವೆ. ಹಾಗೂ ಎಲ್ಲರ ಕೈಯಲ್ಲಿಯೂ ಕೋಲನ್ನು ರಚಿಸಲಾಗಿದೆ. ಈ ಚಿತ್ರದಲ್ಲಿ ಒಟ್ಟು ಐದು ವ್ಯಕ್ತಿಗಳು ಒಂದೇ ಭಂಗಿಯಲ್ಲಿರುವುದು ಕಂಡುಬಂದಿದೆ. ಕೆಂಪು ಹಿನ್ನೆಲೆಯಲ್ಲಿ ಈ ಚಿತ್ರಗಳು ಮೂಡಿಬಂದಿವೆ. ಹಿನ್ನಲೆಯ ಖಾಲಿಜಾಗವನ್ನು ಎಲೆಹೂಗಳಿಂದ ರಚಿಸಲಾಗಿದೆ ಅಲ್ಲದೆ ಮೇಲುಕಾಗದ ಕೆತ್ತುವುದರಿಂದ ಹೂ, ಹಾಗೂ ಗಿಡಗಳಲ್ಲಿ ಈ ಕಲ್ಪನೆ ಕಂಡುಬರುತ್ತದೆ.

**೧೦. ಯಮುನಾ ನದಿ ತೀರದಲ್ಲಿ ಗೋವುಗಳೊಡನೆ ಕೃಷ್ಣನ ಸ್ನೆಹಿತ (ಚಿತ್ರ ಸಂ. ೧೯)**

ಅಖಂಡವಾದ ಅಡ್ಡ ಪಟ್ಟಿಕೆಯಲ್ಲಿ ಈ ಚಿತ್ರಗಳು ಮೂಡಿಬಂದಿದೆ. ಇಲ್ಲಿ ಕೃಷ್ಣ ಸಾಮಾನ್ಯ ಬಾಲಕರಂತೆ ಮೂಡಿಬಂದಿದ್ದು ಮೈಬಣ್ಣವಾಗಿ ಗೋದಿಗೆಂಪು ಬಣ್ಣ ಉಪಯೋಗಿಸಲಾಗಿದೆ. ಕೆಂಪು ಚಡ್ಡಿ ತೊಟ್ಟು ತಲೆಯಮೇಲೆ ಕೆಂಪು ವಸ್ತ್ರಧರಿಸಿದ್ದಾನೆ. ಕೈಯಲ್ಲಿ ಮರದ ಕೋಲೊಂದನ್ನು ಹಿಡಿದ ಕೃಷ್ಣ ಬಲಗಾಲನ್ನು ಡೊಂಕಿಸಿ ನಿಂತಿದ್ದಾನೆ. ನಾಲ್ಕು ಗೋವುಗಳು ಬಿಳಿವರ್ಣದಲ್ಲಿ ರಚನೆಯಾದರೆ, ಆರು ಗೋವುಗಳಲ್ಲಿ ಮೂರು ಹಳದಿ ಮೂರು ಗೋದಿಗೆಂಪು ಬಣ್ಣಹೊಂದಿವೆ. ಈ ಎಲ್ಲ ಗೋವುಗಳು ಮೇಲ್ಮುಖಮಾಡಿದರೆ ಕೆಳಗಿನ ಎಡ ಮತ್ತು ಬಲಭಾಗದ ಗೋವು ಕೆಳಮುಖಮಾಡಿವೆ. ಈ ಚಿತ್ರಗಳು ದಟ್ಟ ನೀಲಿವರ್ಣದ ಮೇಲೆ ರಚನೆಯಾಗಿದ್ದು ಅಲ್ಲದೇ ಖಾಲಿಜಾಗವನ್ನು ತುಂಬಿಸಲು ಬಿಳಿವರ್ಣದ ಎಲೆ ಹೂ ಬಳ್ಳಿಗಳನ್ನು ರಚಿಸಿದ್ದಾರೆ.

**೧೧. ಕೃಷ್ಣನ ಕೊಳಲುವಾದನವನ್ನು ಆಲಿಸುತ್ತಿರುವ ಗೋವುಗಳ ಗುಂಪು (ಚಿತ್ರ ಸಂ. ೨೦)**

ಗೋಪಾಲ ಕೃಷ್ಣನ ಕೊಳಲಿನ ನಾದ ಕೇಳಿದ ಗೋವುಗಳೆಲ್ಲ ಸಂಗೀತವನ್ನು ಆಲಿಸುವುದರೊಂದಿಗೆ ಎಲ್ಲಾ ಗೋವುಗಳು ಎಕಚಿತ್ತದಿಂದ ಮೇಲಕ್ಕೆ ಮುಖಮಾಡಿ ನಿಂತಿರುವುದು ಕಂಡುಬರುತ್ತದೆ. ಎಲ್ಲ ಗೋವುಗಳ ಕೊರಳಲ್ಲಿ ಘಂಟೆಯ ಸರವು ರಚನೆಯಾಗಿದ್ದು, ಅದರಲ್ಲಿ ಮೂರು ಗೋವುಗಳು ಕಪ್ಪು ಬಣ್ಣವನ್ನು ಹೊಂದಿವೆ. ಮೈಮೇಲೆ ಬಿಳಿವರ್ಣದ ಪಟ್ಟಿಕೆಯು ರಚನೆಯಾಗಿದೆ. ಅದರಂತೆಯೇ ತೆಳು ಹಳದಿ ವರ್ಣದ ಗೋವುಗಳಲ್ಲಿ ಎರಡು ಪ್ರತ್ಯೇಕವಿದ್ದು, ಮೈ ಮೇಲೆ ಹುಲಿ ಚರ್ಮದ ಹಾಗೆ ಕಪ್ಪು ಬಣ್ಣದ ಪಟ್ಟಿಕೆಯನ್ನು ಬಿಡಿಸಲಾಗಿದೆ. ಹಾಗೇ ಇಲ್ಲಿ ತಿಳಿಗುಲಾಬಿ ಗೋವುಗಳು, ಗೋಧಿ ಬಣ್ಣದ ಗೋವುಗಳು ತೆಳು ಹಳದಿ ವರ್ಣದ ಹಿನ್ನೆಲೆಯಲ್ಲಿ ರಚನೆಯಾಗಿವೆ. ಈ ಎಲ್ಲ ಗೋವುಗಳಿಗೆ ನೆರಳು ಬೆಳಕಿನ ವ್ಯತ್ಯಾಸವನ್ನು ತೋರಿಸುವುದಕ್ಕೆ ತೆಳು ಗುಲಾಬಿ, ಕೆಂಪು, ಬಣ್ಣ, ಬಳಸುವುದರೊಂದಿಗೆ ಹೊರರೇಖೆಯಾಗಿ ಕಪ್ಪು ಬಣ್ಣವನ್ನು ಉಪಯೋಗಿಸಲಾಗಿದೆ.

**೧೨. ಕಾಳಿಂಗ ಮರ್ಧನಗೈದು ತಮ್ಮ ಪತಿಯರನ್ನು ಕಾಪಾಡುವಂತೆ ಪ್ರಾರ್ಥಿಸುತ್ತಿರುವ ಮತ್ಸಕನ್ಯೆಯರು (ಚಿತ್ರ ಸಂ. ೨೧)**

ಇಲ್ಲಿ ಹಾವಿನ ವೇಶದಲ್ಲಿ ಸ್ತ್ರೀಯರು ಸಾಲಾಗಿನಿಂತು ಪ್ರಾರ್ಥನೆ ಮಾಡುತ್ತಿದ್ದಾರೆ. ತನ್ನ ಗಂಡನನ್ನು ಉಳಿಸು ಎಂದು ಕಾಳಿಕಾದೇವಿ ಹಾಗೂ ಕೃಷ್ಣನನ್ನು ಕೈಮುಗಿದು ಕೇಳುತ್ತಿರುವ ದೃಶ್ಯ ಇದಾಗಿದೆ. ಇಲ್ಲಿ ಮೊದಲನೆಯವಳು ಕೈಯಲ್ಲಿ ಪಂಚಾರತಿ ಹಿಡಿದು ದೇವಿಗೆ ಬೆಳಗುತ್ತಿರುವ ಹಾಗಿದೆ. ಹಿಂದಿನ ನಾಲ್ಕು ಸ್ತ್ರೀಯರು ಕೈ ಜೋಡಿಸಿ ದೇವರಿಗೆ ನಮಸ್ಕರಿಸುತ್ತಿದ್ದಾರೆ. ಚಿತ್ರ ಇದಾಗಿದೆ. ಈ ಎಲ್ಲ ಸ್ತ್ರೀಯರ ಸೊಂಟದ ಕೆಳಭಾಗ ಹಾವಿನಿಂದ ಕೂಡಿದ್ದು, ಹಳದಿ, ತಿಳಿಗುಲಾಬಿಯಲ್ಲಿ ರಚನೆಯಾಗಿವೆ. ಮೇಲ್ಭಾಗದಲ್ಲಿ ಮೀನಿನ ಚರ್ಮದ ಹಾಗೆ ಚಿಪ್ಪುಗಳು ರಚನೆಯಾಗಿವೆ. ಈ ಐದು ಜನ ಸ್ತ್ರೀಯರು ಆಭರಣಧಾರಿಯಾಗಿದ್ದು ಮೂವರು

ಸ್ತ್ರೀಯರ ಕುಪ್ಪಸ ಕೆಂಪು ವರ್ಣದಲ್ಲಿ ಮೂಡಿವೆ ಬಂದಿವೆ. ಮತ್ತಿಬ್ಬರ ಸ್ತ್ರೀಯರ ಕುಪ್ಪಸ ಹಳದಿ ವರ್ಣದಲ್ಲಿ ಮೂಡಿಬಂದಿವೆ. ಈ ಕಲಾಕೃತಿಯಲ್ಲಿ ಹೆಚ್ಚಾಗಿ ರೇಖೆಗಳು ಪ್ರಧಾನವಾಗಿ ಮೂಡಿಬಂದಿವೆ ಚಿತ್ರಗಳ ಮಧ್ಯದ ಖಾಲಿಜಾಗವನ್ನು ದಟ್ಟ ಹಸಿರು ವರ್ಣದ ಎಲೆ, ಕೆಂಪುಹೂಗಳಿಂದ ರಚಿಸಲಾಗಿದೆ. ಈ ಎಲ್ಲಾಚಿತ್ರಗಳು ಹಳದಿ ಹಿನ್ನೆಲೆಯಲ್ಲಿ ಮೂಡಿಬಂದಿವೆ.

**೧೩. ಗೋವುಗಳೊಡನೆ ಕೃಷ್ಣನ ಬಾಲ್ಯ ಸ್ನೇಹಿತರು (ಚಿತ್ರ ಸಂ. ೨೨)**

ಈ ಚಿತ್ರವು ಎರಡು ವರ್ಣಗಳಲ್ಲಿ ಚಿತ್ರಿತವಾಗಿದ್ದು ಸರಣಿ ಚಿತ್ರದ ಹಾಗೆ ಮೂಡಿಬಂದಿದೆ. ಅಲ್ಲದೇ ಗೋವುಗಳು, ಎಲೆಬಳ್ಳಿಗಳು ಸಹ ರಚನೆಯಾಗಿವೆ. ಇದೇ ಮಾದರಿಯ ಬಟ್ಟೆಯಲ್ಲಿಯು ಸಹ ಕಾಣಬಹುದಾಗಿದೆ. ಮೇಲ್ಭಾಗದಲ್ಲಿ ಕೆಂಪು ಚಡ್ಡಿ ತೊಟ್ಟ ಕೃಷ್ಣನ ಸ್ನೇಹಿತರ ಚಿತ್ರ ಅಪೂರ್ಣವಾಗಿ ಚಿತ್ರಿತಗೊಂಡಿದೆ. ಕೆಳಭಾಗದಲ್ಲಿ ಚಿತ್ರಿತಗೊಂಡಿರುವ ಸ್ನೇಹಿತರನ್ನು ತೆಳುನೀಲಿ, ಹಳದಿ ಮತ್ತು ಕೆಂಪು ವಸ್ತ್ರ ಇತ್ಯಾದಿಗಳು ರಚನೆಯಾಗಿವೆ. ಇಲ್ಲಿ ದನಗಾಹಿಗಳು ಮೊಂಡೆಯೂರಿಕುಳಿತು ಎರಡು ಕೈಗಳನ್ನು ಮೇಲಕ್ಕೆ ಒಯ್ದು ಎನನ್ನೋ ಪಡೆಯುವ ಹಾಗೆ ಕಂಡುಬಂದಿದೆ. ಹಿಂಭಾಗದಲ್ಲಿ ಬಿಳಿಗೋವು, ಹಾಗೂ ಹಳದಿ ಗೋವು ಮೂಡಿಬಂದಿದೆ. ಒಟ್ಟುಚಿತ್ರದ ಹಿಂಭಾಗವೆಲ್ಲ ನಕ್ಷಾವಿನ್ಯಾಸಗಳಿಂದ ಕೂಡಿದೆ ವಿನ್ಯಾಸಗಳಿಗೆ ಪ್ರಮುಖವಾಗಿ ಹಳದಿ ಬಣ್ಣ ಉಪಯೋಗಿಸಲಾಗಿದೆ. ದಟ್ಟ ಕಪ್ಪು ವರ್ಣದಹಿಂದೆ ಈ ಚಿತ್ರಗಳು ಮೂಡಿಬಂದಿವೆ.

**೧೪. ಹಾಲು ಮಾರಲು ಹೋರಟಿರುವ ಗೊಲ್ಲರು (ಚಿತ್ರ ಸಂ. ೨೩)**

ಈ ಚಿತ್ರವು ಮಥುರಾ ಪ್ರದೇಶದಲ್ಲಿ ಕೃಷ್ಣ ಹಾಲು ಮಾರುತ್ತಿರುವ ದೃಶ್ಯದಲ್ಲಿದೆ ಇಲ್ಲಿ ಮೂವರ ಚಿತ್ರಗಳು ಮೂಡಿಬಂದಿವೆ. ಮೇಲ್ಭಾಗದಲ್ಲಿ ತಲೆಯ ಮೇಲೆ ಬುಟ್ಟಿ ಹೊತ್ತು ಮಾರುತ್ತಿರುವ ದೃಶ್ಯವಿದ್ದು, ಮೈಬಣ್ಣವಾಗಿ ಹಳದಿ ಲೇಪನವಿದೆ. ತಲೆಯಮೇಲಿನ ಪೇಟಾ ತೆಳುನೀಲಿಯಾಗಿದ್ದು, ಅಲ್ಲಿಂದ ಇಳಿಬಿದ್ದ ವಸ್ತ್ರವು ಸಹ ನೀಲಿಯಾಗಿದೆ. ಕೆಂಪು ಚಡ್ಡಿ ತೊಟ್ಟ ಕೃಷ್ಣನು ಕೈಯಲ್ಲಿ ಬೆಣ್ಣೆಯ ಸಣ್ಣ ಮಡಿಕೆಯೊಂದನ್ನು ಹಿಡಿದಿದ್ದಾನೆ. ಈ ಇಬ್ಬರ ಚಿತ್ರಗಳು ಒಂದೇ ತೆರನಾಗಿ ಮೂಡಿಬಂದಿವೆ. ಕೆಳಭಾಗದಲ್ಲಿ ಇನ್ನೊಬ್ಬ ಗೊಲ್ಲ ಹಾಲು, ಮೊಸರು ತುಂಬಿದ ಭಾರವಾದ ಮಡಕೆಯನ್ನು ಮರದ ಕೋಲಿಗೆ ಹಗ್ಗದ ಸಹಾಯದಿಂದ ಎರಡುಬದಿಕಟ್ಟಿ ಎರಡುಕೈಯಲ್ಲಿ ಹಿಡಿದುಕೊಂಡು ಮಾರಾಟ ಮಾಡುವ ದೃಶ್ಯಮೂಡಿಬಂದಿದೆ. ಇಲ್ಲಿ ಕೃಷ್ಣನ ಪೇಟಾ ಕೆಂಪು ವರ್ಣದ್ದಾದರೆ ಕೆಳಗೆ ಇಳಿಬಿದ್ದ ವಸ್ತ್ರವು ನೀಲಿ ವರ್ಣವಾಗಿದೆ. ಕೃಷ್ಣನ ಮೈಬಣ್ಣದಂತೆ ಹಳದಿ ಚಡ್ಡಿಯುಟ್ಟು ಹೊರಟಿರುವ ದೃಶ್ಯ ಮೂಡಿಬಂದಿದೆ. ಹಾಲು, ಮೊಸರು, ಬೆಣ್ಣೆತುಂಬಿದ ಮಡಿಕೆಗಳಿಗೆ ತಿಳಿನೀಲಿ ಬಳಸಿದ್ದು ಅಲ್ಲದೇ ಅಲ್ಲಲ್ಲಿ ಹೂಗಿಡಗಳು ಮೂಡಿವೆ. ತೆಳು ಹಳದಿ ಹಿನ್ನೆಲೆಯಲ್ಲಿ ಮೂಡಿಬಂದ ಚಿತ್ರವಾಗಿದೆ.

**೧೫. ಕಾಳಿಂಗ ಮರ್ಧನ (ಚಿತ್ರ ಸಂ. ೨೪)**

ಇಲ್ಲಿ ಕೃಷ್ಣನು ನೀಲಿಮೈಬಣ್ಣಹೊಂದಿ ಕಿರೀಟಾಭರಣಧಾರಿಯಾಗಿ ಹಳದಿ ಪಂಚೆತೊಟ್ಟು ಕಾಳಿಂಗದ ಮೇಲೆ ಕಾಲುಇಟ್ಟು ಅದರ ಬಾಲದತುದಿಯನ್ನು ಕೈಯಲ್ಲಿ ಹಿಡಿದಿರುವ ದೃಶ್ಯಕಂಡುಬರುತ್ತದೆ. ಕೊರಳಲ್ಲಿ ಬಿಳಿವರ್ಣದ ಮುತ್ತಿನ ಸರಗಳು ಪಂಚೆಯಲ್ಲಿಯ ಕೆಂಪು ಗೆರೆಯು ಕಂಡುಬಂದು ಕೃಷ್ಣನ ಜಲಗೈಬೆರಳುಗಳು



ಕಾಗದ ಕಿತ್ತಿದ್ದರಿಂದ ನಾಶವಾಗಿವೆ. ಈ ಕಲಾಕೃತಿಯಲ್ಲಿ ಹೊರರೇಖೆಗಳು ಹೆಚ್ಚಾಗಿ ತೆಳು ಹಾಗೂ ದಪ್ಪವಾಗಿ ಹಾಕಲಾಗಿದೆ. ಕಾಳಿಂಗ ಸರ್ಪಕ್ಕೆ ನೀಲಿಬಣ್ಣ ಬಳಿದು ಜೀಳಿಚುಕ್ಕೆಗಳನ್ನು ರಚಿಸಿದಲ್ಲದೇ ಕಪ್ಪುಬಣ್ಣದ ಹಾಗೂ ಕೆಂಪು ಬಣ್ಣದ ಹೊರರೇಖೆಯನ್ನು ಎಳೆಯಲಾಗಿದೆ. ಇಲ್ಲಿ ಕೃಷ್ಣನ ನೃತ್ಯಮಾಡುತ್ತಿರುವ ಹಾಗೆ ಕಂಡು ಬಂದು ಒಂದು ಕಾಲು ಮೇಲಕ್ಕೆ ಇನ್ನೊಂದು ಕಾಲು ಕೆಳಕ್ಕೆ ನಿಂತಿರುವ ಭಂಗಿಯಲ್ಲಿದೆ. ಅಲ್ಲಲ್ಲಿ ಚಿಕ್ಕ ಚಿಕ್ಕ ಎಲೆ ಹೂಗಳನ್ನು ರಚಿಸಲಾಗಿದೆ.

**೧೬. ಕೃಷ್ಣನನ್ನು ಪ್ರಾರ್ಥಿಸುತ್ತಿರುವ ಮತ್ಸಕನ್ಯೆಯರು (ಚಿತ್ರ ಸಂ. ೨೫)**

ಕೃಷ್ಣನ ಕುರಿತು ಬೇಡಿಕೊಳ್ಳುತ್ತಿರುವ ಮೂವರು ಸ್ತ್ರೀಯರು ಪಂಚಾರತಿಯೊಂದಿಗೆ ಕಾಳಿಕಾದೇವಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದಾರೆ. ಈ ಸ್ತ್ರೀಯರು ಸಾಲಾಗಿನಿಂತು ಹಳದಿ ಮೈಬಣ್ಣಹೊಂದಿದ್ದಾರೆ. ಗುಲಾಬಿ ಕುಪ್ಪಸ ತೊಟ್ಟ ಸ್ತ್ರೀಯರು ಸೊಂಟವ ಕೆಳಭಾಗ ಹಾವಿನಿಂದ ರಚನೆಯಾಗಿದೆ. ಮೊದಲ ಹಾಗು ಕೊನೆಯವಳು ತಿಳಿಗುಲಾಬಿ ವರ್ಣದ ಚಿಪ್ಪಿನಿಂದ ರಚನೆಯಾಗಿದೆ ಮಧ್ಯದವಳು ಹಳದಿ ವರ್ಣದ ಚಿಪ್ಪಿನಂತೆ ರಚನೆಯಾದ ವಿನ್ಯಾಸ ಕಂಡುಬಂದಿದೆ. ಆಭರಣಧಾರಿಯಾದ ಸ್ತ್ರೀಯರು ಸ್ತನಗಳನ್ನು ದೊಡ್ಡದಾಗಿ ವೃತ್ತಾಕಾರವಾಗಿ ಚಿತ್ರಿಸಲಾಗಿದೆ. ಕೊರಳಲ್ಲಿ ಮುತ್ತಿನ ಹಾರ ಹಿಂಭಾಗದಲ್ಲಿ ಹೂವು ಎಲೆಯನ್ನು ಬಿಡಿಸಲಾಗಿದೆ. ಕಲಾಕೃತಿಯ ಕೆಳಭಾಗದ ಭಾಗವು ಕಿತ್ತುಹೋಗಿದೆ. ಚಿತ್ರದಲ್ಲಿ ಅಲ್ಲಲ್ಲಿ ಮರಾಠಿ ಅಕ್ಷರಗಳು ಮೂಡಿಬಂದಿವೆ. ಅಲ್ಲದೆ ತೆಳುಹಳದಿ ಹಿನ್ನೆಲೆಯಲ್ಲಿ ಈ ಚಿತ್ರಗಳು ಮೂಡಿವೆ.

**೧೭. ಕೃಷ್ಣನ ವಸ್ತ್ರಾಭರಣವನ್ನು ವರ್ಣಿಸುತ್ತಿರುವ ಗೋಪಿಕೆಯರು (ಚಿತ್ರ ಸಂ. ೨೬)**

ಇಲ್ಲಿ ಸ್ತ್ರೀಯರು ಶೃಂಗಾರದಿಂದ ಗುಂಪಾಗಿ ವರ್ಣಿಸುತ್ತಿರುವುದು ಕಂಡುಬಂದಿದೆ. ಮೂವರು ಸ್ತ್ರೀಯರು ನಿಂತು ಕೈಮುಂದೆ ಮಾಡಿ ಬೇಡಿಕೊಂಡರೆ ಮತ್ತೆ ಮೂವರು ಸ್ತ್ರೀಯರು ಕುಳಿತು ಕೈಮಾಡಿ ವರ್ಣಿಸುತ್ತಿದ್ದಾರೆ. ಇಬ್ಬರು ತಿಳಿಗುಲಾಬಿ, ಮತ್ತಿಬ್ಬರು ನೀಲಿ ಇಬ್ಬರು ಕೆಂಪು ಸೀರೆ ತೊಟ್ಟಿದ್ದಾರೆ. ನಾಲ್ಕು ಜನ ಸ್ತ್ರೀಯರು ಕೆಂಪು ಕುಪ್ಪಸ ತೊಟ್ಟರೆ ಇಬ್ಬರು ನೀಲಿ ಕುಪ್ಪಸ ತೊಟ್ಟಿದ್ದಾರೆ. ಪ್ರತಿಯೊಬ್ಬರ ಕೊರಳಲ್ಲಿ ಮುತ್ತಿನ ಹಾರ ಹಾಕಿದ್ದು ಪ್ರಮುಖವಾಗಿ ಕಂಡುಬರುತ್ತದೆ. ಎಲ್ಲ ಸ್ತ್ರೀಯರು ಆಭರಣಧಾರಿಯಾಗಿ ಮೂಡಿಬಂದಿದ್ದಾರೆ. ಹಿನ್ನೆಲೆಯ ಖಾಲಿಜಾಗವನ್ನು ಹಳದಿ ಲೇಪನಮಾಡಿ ಅಲ್ಲಲ್ಲಿ ಹೂಗಿಡವನ್ನು ರಚಿಸಿದ್ದಾರೆ. ಅಖಂಡವಾದ ಪಟ್ಟಿಕೆಯಲ್ಲಿ ಈ ಚಿತ್ರಗಳು ಮೂಡಿಬಂದಿವೆ.

**೧೮. ಅಕ್ರೂರನು ತನ್ನ ರಥದಲ್ಲಿ ಕಂಸನನ್ನು ಕಾಣಲು ಮಧುರೆಗೆ ಹೋರಟ್ಟಿದ್ದು ಗೋಪಿಕೆಯರು ತಡೆಯುತ್ತಿರು ದೃಶ್ಯ (ಚಿತ್ರ ಸಂ. ೨೭)**

ಅಖಂಡವಾದ ಪಟ್ಟಿಕೆಯಲ್ಲಿ ಈ ಚಿತ್ರ ಮೂಡಿಬಂದಿದೆ. ಇಲ್ಲಿ ಅಕ್ರೂರನು ತನ್ನ ರಥದಲ್ಲಿ ಕೃಷ್ಣ ಮತ್ತು ಬಲರಾಮನ್ನು ಕರೆದುಕೊಂಡು ಮಥುರಾದಲ್ಲಿರುವ ಕಂಸನನ್ನು ಬೇಟ್ಟಿಯಾಗಲು ಹೊರಟದ್ದಾನೆ. ಕೆಂಪು ವರ್ಣದ ರಥದಲ್ಲಿ ಮೊಂಡೆಯೂರಿಕುಳಿತ ಕೃಷ್ಣನು ಬಲಗೈಯನ್ನು ಮುಂದೆ ಮಾಡಿ ಕುಳಿತಿದ್ದಾನೆ. ಇಲ್ಲಿ ಕೃಷ್ಣನ ಹಿಂದೆ ಬಲರಾಮನು ಕಂಡುಬಂದು ಇಬ್ಬರು ಒಂದೇ ಭಂಗಿಯಲ್ಲಿ ಕುಳಿತಿದ್ದಾರೆ. ಕೆಂಪು



ಧ್ವಜವನ್ನು ಹೊಂದಿದ. ರಥದ ಗಾಲಿಯು ವೃತ್ತಾಕಾರವಾಗಿ ರಚಿಸದೆ ಅಂಕುಡೊಂಕಾಗಿ ಮೂಡಿಬಂದಿವೆ. ಇಲ್ಲಿ ಮಧ್ಯದ ಭಾಗವನ್ನು ನೀಲಿಬಣ್ಣದಿಂದ ತುಂಬಲಾಗಿದೆ. ಈ ರಥದಲ್ಲಿ ಹೆಚ್ಚಾಗಿ ರೇಖೆಗಳು ಹಾಗೂ ಬಿಳಿವರ್ಣದ ಚುಕ್ಕೆಗಳೇ ಪ್ರಧಾನವಾಗಿದೆ. ಮಥುರಾಕ್ಕೆ ಹೊರಟ ಕೃಷ್ಣನ ರಥಕ್ಕೆ ಎದುರು ಕುಳಿತಿರುವ ಗೋಪಿಕಾ ಸ್ತ್ರೀಯರು ಕೃಷ್ಣನಿಗೆ ನಮಸ್ಕರಿಸುವ ಹಾಗೆ ಮೂಡಿಬಂದಿದ್ದಾರೆ. ಇಲ್ಲಿ ಸಾಮಾನ್ಯವಾಗಿ ಗೋಪಿಕಾ ಸ್ತ್ರೀಯರು ಕೆಂಪು, ತಿಳಿಗುಲಾಬಿ, ತೆಳುನೀಲಿ ಸೀರೆಯನ್ನು ತೊಟ್ಟಿದ್ದಾರೆ. ಕುಪ್ಪಸ ಹಾಗೂ ಸೀರೆಗಳಲ್ಲಿ ರೇಖೆಗಳು, ಚುಕ್ಕೆಗಳು ಪ್ರಧಾನವಾಗಿ ಮೂಡಿಬಂದಿವೆ. ಈ ಎಲ್ಲ ಚಿತ್ರಗಳು ತೆಳುಹಳದಿ ಹಿನ್ನೆಲೆಯಲ್ಲಿ ಮೂಡಿಬಂದಿವೆ.

### ೧೯. ಸಂಗೀತದಲ್ಲಿ ಮಗ್ನರಾದ ರಾಧಾ-ಕೃಷ್ಣ (ಚಿತ್ರ ಸಂ. ೨೮)

ಬೃಹತ್ತಾದ ಮಂಟಪದಲ್ಲಿ ರಾಧೆಯು ವೀಣೆಯನ್ನು ನುಡಿಸುತ್ತಿರುವುದು ಕೃಷ್ಣನು ರಾಧೆಯ ಸಂಗೀತವನ್ನು ಆಲಿಸುತ್ತಿರುವ ದೃಶ್ಯವನ್ನು ಈ ಚಿತ್ರವು ಒಳಗೊಂಡಿದೆ. ಕೃಷ್ಣನು ನೀಲಿಮೈಬಣ್ಣಹೊಂದಿ ಕಿರೀಟಾಭರಣಧಾರಿಯಾಗಿದ್ದಾನೆ. ಹಳದಿ ಪಂಚೆಯುಟ್ಟ ಕೃಷ್ಣನು ಕೆಂಪು ವಸ್ತ್ರಧರಿಸಿದ್ದಾನೆ. ಪಂಚೆ ಮತ್ತು ರಾಧೆಯ ಮೈ ಬಣ್ಣ ಒಂದೇ ರೀತಿಯಾಗಿದೆ. ರಾಧೆಯು ಕೆಂಪು ಕುಪ್ಪಸ, ಹಸಿರು ಸೀರೆ ತೊಟ್ಟಿದ್ದಾಳೆ. ಕಿವಿಯಲ್ಲಿ ದೊಡ್ಡದಾದ ಕಿವಿಯೋಲೆ ಕೋರಳಾಭರಣ ಮುಂತಾದವುಗಳಾಗಿವೆ. ವೀಣೆಯ ಬಣ್ಣವನ್ನು ಮನುಷ್ಯರ ಮೈಬಣ್ಣವಾದ ಗೌರವರ್ಣ ಕಂಡುಬರುತ್ತದೆ. ಈ ಚಿತ್ರದ ಹಿನ್ನೆಲೆಯಲ್ಲಿ ಕಪ್ಪುವರ್ಣ ಬಳಸಲಾಗಿದ್ದು, ಎಲೆಗಳ ಹಣೆಕೆಯಾಕಾರ ಬಿಡಿಸಿ ಅಖಂಡವಾದ ಪೀಠದಂತ್ತಿರುವ ಮಂಟಪದಲ್ಲಿ ಕುಳಿತಿದ್ದಾರೆ. ರಾಧೆಯ ಹಿಂದಿನ ಎರಡನೆಯ ಕಂಭವು ಕತ್ತರಿಸಿದ್ದು ಕಂಡುಬರುತ್ತದೆ. ಅಕ್ಕ ಪಕ್ಕದಲ್ಲಿ ಹಸಿರು ಬಣ್ಣದ ಎಲೆಯನ್ನು ಬಿಡಿಸಿದ್ದಾರೆ. ಬೃಹತ್ತಾದ ಬಿಳಿವರ್ಣದ ಮಂಟಪದಲ್ಲಿ ಕಪ್ಪು ಬಣ್ಣದ ರೇಖೆಯಿಂದ ಎಲೆಯ ಪೊಕಳೆಯಂತೆ ವಿನ್ಯಾಸಗಳನ್ನು ಬಿಡಿಸಲಾಗಿಧೆ.

### ೨೦. ರಾಧಾಕೃಷ್ಣರ ಸರಸ-ವಿರಸ (ಚಿತ್ರ ಸಂ. ೨೯)

ಈ ಚಿತ್ರದಲ್ಲಿ ಕೃಷ್ಣರಾಧೆಯರಿಗಿಂತ ದೊಡ್ಡವಾದ ಗಿಡದ ಟೊಂಗೆಯನ್ನು ಮಧ್ಯದಲ್ಲಿ ಚಿತ್ರಿಸಿ ಅವುಗಳ ಮಧ್ಯ ರಾಧೆಕೃಷ್ಣನ ಚಿತ್ರ ಬಿಡಿಸಲಾಗಿದೆ. ಕೃಷ್ಣನು ಕೆಂಪು ಕಿರೀಟಾಭರಣಧಾರಿಯಾಗಿದ್ದಾನೆ. ಹಳದಿ ಪಂಚೆತೊಟ್ಟ ಕೃಷ್ಣನು ನೀಲಿ ಮೈಬಣ್ಣ ಹೊಂದಿದ್ದಾನೆ. ಇಲ್ಲಿ ಚಿಂತೆಯಲ್ಲಿದ್ದ ರಾಧೆಯನ್ನು ಹಾಸ್ಯದೊಂದಿಗೆ ಮನಃಪೂಲಿಸುವ ಪ್ರಯತ್ನ ನಡೆಸುತ್ತಿದ್ದಾನೆ. ರಾಧೆಯು ಇವನ ಹಾಸ್ಯವಾತಿಗೆ ಮರುಳಾಗದೆ. ಮೂಬತಿರುಗಿಸಿ ಕೊಂಡಿರುವುದರೊಂದಿಗೆ ಕೆಂಪು ಸೀರೆ ಕೆಂಪು ಕುಪ್ಪಸ ತೊಟ್ಟಿದ್ದಾಳೆ. ಕೃಷ್ಣನು ಅವಳ ಮುಖವನ್ನು ನೋಡುವುದಕ್ಕೆ ತನ್ನ ಕೈಯಿಂದ ಅವಳ ಬುಜ ಮತ್ತು ಕತ್ತಿನ ಭಾಗಕ್ಕೆ ಕೈಹಾಕಿರುವುದು ಕಂಡುಬಂದಿದೆ. ರಾಧೆ ಹಾಗೂ ಕೃಷ್ಣ ಇಬ್ಬರು ಕುಳಿತ್ತಿದ್ದು ಹಿನ್ನೆಲೆಯ ಖಾಲಿ ಜಾಗವನ್ನು ಸಂಯೋಜನೆಯ ದೃಷ್ಟಿಯಿಂದ ಮರದ ಟೊಂಗೆಯನ್ನು ದಟ್ಟ ಹಸಿರು ವರ್ಣಬಳಿಸಿ ರಚಿಸಿದ್ದಾರೆ. ಕೆಂಪು ಹೂಗಳು ಅಲ್ಲಲ್ಲಿ ಕಂಡುಬಂದಿವೆ. ಈ ಚಿತ್ರವು ಬಿಳಿ ವರ್ಣದ ಹಿನ್ನಲಿ ಲೇಪನದ ಮೇಲೆ ಮೂಡಿಬಂದಿದೆ.



### ೨೧ ರಾಧಾ-ಕೃಷ್ಣರ ಸರಸ (ಚಿತ್ರ ಸಂ. ೩೦)

ಚಿತ್ರದಲ್ಲಿ ಕೃಷ್ಣನು ನೀಲಿಮೈಬಣ್ಣವಾಗಿದ್ದು ಕಿರೀಟಾಭರಣಧಾರಿಯಾಗಿದ್ದಾನೆ. ಹಳದಿ ಪಂಚೆಯ ತೊಟ್ಟು ಎರಡು ಕಾಲು ಜೋಡಿಸಿ ನಿಂತ ಕೃಷ್ಣನು ರಾಧೆಯ ಸೊಂಟದಲ್ಲಿ ಕೈಯನ್ನು ಇಟ್ಟು ರಾಧೆಯು ಕೃಷ್ಣನ ಮುಖವನ್ನು ನೋಡುತ್ತ ಅವನ ತಲೆಯಮೇಲೆ ಕೈಯಿಟ್ಟಿದ್ದಾಳೆ. ಮತ್ತೊಂದು ಕೈಯನ್ನು ಕೃಷ್ಣನ ಬಲಗೈಯನ್ನು ಮುಟ್ಟಿರುವಹಾಗೆ ಕಂಡುಬರುತ್ತದೆ. ಇಲ್ಲಿ ರಾಧೆಯು ಬಲಗಾಲನ್ನು ಡೊಂಕಿಸಿ ಮುಂದೆ ಇಟ್ಟಿದ್ದಾಳೆ. ಎಡಗಾಲನ್ನು ಹಿಂದಕ್ಕೆ ಸ್ವಲ್ಪ ಭಾಗಿಸಿದಂತೆ ಕಂಡುಬರುವುದಲ್ಲದೆ. ಕೃಷ್ಣನು ರಾಧೆಯನ್ನು ಚುಂಬಿಸುವ ಹಾಗೆ ಮೂಡಿಬಂದಿದೆ. ಹಳದಿವರ್ಣದ ಕುಪ್ಪಸತೊಟ್ಟ ರಾಧೆಯ ಸ್ತನವನ್ನು ವೃತ್ತಾಕಾರವಾಗಿ ಚಿತ್ರಿಸಿ ಕುಪ್ಪಸದ ಮೇಲೆ ರೇಖೆಗಳನ್ನು ಬಿಡಿಸಲಾಗಿದೆ. ಕೆಂಪು ಸೀರೆತೊಟ್ಟು ಅದರಲ್ಲಿ ಬಿಳಿರೇಖೆ, ಹಾಗೂ ಚುಕ್ಕೆಗಳನ್ನು ಬರೆಯಲಾಗಿದೆ. ಹಲವು ಆಭರಣಧಾರಿಯಾದ ರಾಧೆಯು ವಿಚಿತ್ರ ಭಂಗಿಯಲ್ಲಿ ಕುಳಿತಿದ್ದಾಳೆ. ಕೃಷ್ಣನ ಭುಜದಿಂದ ಹಿಂದಕ್ಕೆ ಹೋದ ವಸ್ತ್ರ ಕೆಂಪು ವರ್ಣದ್ದಾಗಿದೆ. ಈ ಚಿತ್ರವು ಮರದ ಕೆಳಗೆ ರಚನೆಯಾಗಿದ್ದು, ಇಲ್ಲಿ ಮರದ ಎಲೆಯನ್ನು ಹಸಿರು ವರ್ಣದಿಂದ ರಚಿಸಲಾಗಿದೆ. ಕಾಂಡವನ್ನು ಗೋದಿಗೆಂಪು ಬಣ್ಣಬಳಸಿದ್ದು ಕಂಡುಬರುತ್ತದೆ. ಈ ಎಲ್ಲಾ ಚಿತ್ರಗಳು ತೆಳು ಹಳದಿ ಹಿನ್ನೆಲೆಯಲ್ಲಿ ಮೂಡಿಬಂದಿವೆ.

### ೨೨. ಕೃಷ್ಣ ಮತ್ತು ರಾಧೆ ಅಜರಾವರಿಸುತ್ತಿರುವ ದೃಶ್ಯ (ಚಿತ್ರ ಸಂ. ೩೧)

ಇಲ್ಲಿ ರಾಧೆ ಕೃಷ್ಣ ಇಬ್ಬರು ಕೂಡಿರುವುದು ಕಂಡುಬರುತ್ತದೆ. ಕೃಷ್ಣನ ಕಿರೀಟವು ಕೆಂಪುವರ್ಣದಿಂದ ಕೂಡಿದ್ದು ಕೊರಳಾಭರಣ ಹಾಗೂ ಕಿವಿಯೋಲೆಯೂ ಸಹ ಕೆಂಪು ವರ್ಣದಿಂದ ಕೂಡಿರುವುದು ಕಂಡುಬರುತ್ತದೆ. ಕೊರಳಲ್ಲಿಯ ಮುತ್ತಿನ ಸರವು ಬಿಳಿವರ್ಣದಿಂದ ರಚನೆಯಾಗಿದೆ. ನೀಲಿ ಮೈಬಣ್ಣಹೊಂದಿದ ಕೃಷ್ಣನು ಹಳದಿ ಪಂಚೆ ತೊಟ್ಟಿರುವುದಾಗಿದೆ. ಭುಜದ ಮೇಲಿನ ವಸ್ತ್ರವು ಕೆಂಪು ವರ್ಣದಿಂದ ರಚಿಸಲಾಗಿದೆ. ಮಧ್ಯದಲ್ಲಿ ಬಿಳಿವರ್ಣದ ರೇಖೆಗಳಿವೆ. ಪಂಚೆಯಲ್ಲಿಯೂ ಕೆಂಪು ವರ್ಣದ ರೇಖೆಯಿದ್ದು, ಕೃಷ್ಣನು ರಾಧೆಯ ಮುಖವನ್ನು ನೋಡುತ್ತಿರುವುದು ಇಬ್ಬರು ಪ್ರೇಮದಲ್ಲಿ ತಲ್ಲೀನರಾದ ಹಾಗೆ ಮೂಡಿಬಂದಿದೆ. ಕೃಷ್ಣನು ರಾಧೆಯ ಕೈಯನ್ನು ಹಿಡಿದು ಎಡಗೈಯನ್ನು ರಾಧೆಯ ಹಿಂಭಾಗಕ್ಕೆ ಒಯ್ದು ರಾಧೆಯು ಸಹ ತನ್ನ ಬಲಗೈಯನ್ನು ಕೃಷ್ಣನ ಹಿಂದೆ ಒಯ್ದಿರುವುದಲ್ಲದೆ ಇಬ್ಬರು ಅಪ್ಪಿಕೊಳ್ಳುವ ಸಂದರ್ಭದ ಹಾಗೆ ಚಿತ್ರಿಸಲಾಗಿದೆ. ಇಲ್ಲಿ ರಾಧೆಯ ಕುಪ್ಪಸ ಕೆಂಪು ವರ್ಣ ಹಾಗೂ ರೇಖೆಗಳು ಮೂಡಿವೆ. ಸೀರೆಯು ಕೆಂಪಾಗಿದ್ದು ಸಾಲಾಗಿ ಚಿಕ್ಕ ಚಿಕ್ಕ ಹೂಗಳನ್ನು ಬಿಡಿಸಿದ್ದಾರೆ. ಈ ದೃಶ್ಯದ ಹಿಂದೆ ಹಸಿರುವರ್ಣದ ಮರ ವಿರುವುದು ಕಂಡುಬರುತ್ತದೆ. ರಾಧೆಯ ಮೈಬಣ್ಣ ಗೋದಿಗೆಂಪು ಬಣ್ಣದಿಂದ ಕೂಡಿದೆ.

### ೨೩. ರಾಧಾ ಕೃಷ್ಣರ ಆಲಿಂಗನ ಭಂಗಿ (ಚಿತ್ರ ಸಂ. ೩೨)

ಇಲ್ಲಿ ಕೃಷ್ಣನು ಹಸಿರು ವನದಲ್ಲಿ ರಾಧೆಯ ಜೊತೆ ಸರಸ ಸಲ್ಲಾಪದಲ್ಲಿ ತೊಡಗಿದ್ದು, ಕೃಷ್ಣನನ್ನು ನೀಲಿ ಮೈಬಣ್ಣವಾಗಿ ಹಳದಿ ಪಂಚೆತೊಟ್ಟಿದ್ದಾನೆ. ಭುಜದ ಮೇಲೆ ಕೆಂಪು ವಸ್ತ್ರ ಇಳಿಬಿದ್ದು ಪಂಚೆ ಹಾಗೂ ವಸ್ತ್ರಗಳಲ್ಲಿ ರೇಖೆ ಚುಕ್ಕೆಗಳನ್ನು ಬಿಡಿಸಲಾಗಿದೆ. ಕೊರಳಲ್ಲಿ ಬಿಳಿಮುತ್ತಿನ ಹಾರ ಹಾಗೂ ವೃತ್ತಾಕಾರದ ಚುಕ್ಕೆಗಳು



ಮೂಡಿವೆ. ರಾಧೆಯ ತೆಳುವಾದ ಸೊಂಟದ ಭಾಗದಿಂದ ನಯವಾದ ಗುಲಾಬಿ ವರ್ಣದ ಸೀರೆಯು ಬಿಳಿಚುಕ್ಕೆಗಳಿಂದ ತುಂಬಿದೆ. ರಾಧೆಯು ಎಡಕ್ಕೆ ಮುಖಮಾಡಿ ಒಂದು ಕೈ ಮೇಲಕ್ಕೆ ಇನ್ನೊಂದು ಕೈ ಕೆಳಕ್ಕೆ ಇದ್ದು ಕೈಯಲ್ಲಿ ಕೋಲಿನಾಕಾರವಿದೆ. ಇಲ್ಲಿ ರಾಧೆಯ ಎರಡು ಸ್ತನಗಳನ್ನು ವೃತ್ತಾಕಾರದಲ್ಲಿ ಮೂಡಿಬಂದಿವೆ. ರಾಧೆಯ ಕಾಲುಗಳಲ್ಲಿ ಒಂದು ಕಾಲು ಮುಂದೆ ಹಿಂದೆ ಮಾಡಿ ನಿಂತಿರುವ ಭಂಗಿಯಲ್ಲಿದೆ. ಸುತ್ತಲು ಗಿಡದ ಟೊಂಗೆಗಳು ರಚನೆಯಾಗಿದ್ದು ಕೆಂಪು ಹೂಗಳನ್ನು ರಚಿಸಿದ್ದಾರೆ. ಈ ಚಿತ್ರವು ತಿಳಿ ಹಳದಿ ಹಿನ್ನೆಲೆಯಲ್ಲಿ ಮೂಡಿಬಂದಿದೆ ಒಟ್ಟಾರೆ ಈ ಚಿತ್ರದಲ್ಲಿ ರಾಧಾ ಕೃಷ್ಣರ ಸರಸ, ಚೆಷ್ಟೇ ಕುರಿತು ಚಿತ್ರಿಸಲಾಗಿವೆ.

**೨೪. ಕೃಷ್ಣ ಮತ್ತು ರಾಧೆಯ ಜೋಡಿ (ಚಿತ್ರ ಸಂ. ೩೩)**

ಬೃಹತ್ತಾದ ಮಂಟಪದಲ್ಲಿ ರಾಧೆ ಮತ್ತು ಕೃಷ್ಣ ಇಬ್ಬರು ನಿಂತು ಸ್ವರ್ಗದಲ್ಲಿರುವ ಶಿವಪಾರ್ವತಿಯರನ್ನು ನೋಡುತ್ತಿರುವ ಹಾಗೆ ಈ ಚಿತ್ರ ಮೂಡಿಬಂದಿದೆ. ಇಲ್ಲಿ ಕೃಷ್ಣ ಹಾಗೂ ರಾಧೆಯು ಆಭರಣಧಾರಿಯಾಗಿ ನಿಂತಿದ್ದಾರೆ. ಕೃಷ್ಣನು ಹಳದಿ ಪಂಚೆ, ಗುಲಾಬಿ ವಸ್ತ್ರ, ರಾಧೆಯು ತೆಳುನೀಲಿ ಸೀರೆ, ಗುಲಾಬಿ, ಕುಪ್ಪಸ ತೊಟ್ಟಿದ್ದಾಳೆ. ನೀಲಿವರ್ಣದ ಕೃಷ್ಣನಿಗೆ ಹಳದಿ ವರ್ಣದ ಮೈಬಣ್ಣವನ್ನು ಹೊಂದಿದ ರಾಧೆಯು ಎಡಭಾಗದಲ್ಲಿ ನಿಂತಿದ್ದಾಳೆ. ಇವಳ ಭುಜದ ಮೇಲೆ ಕೈಯಿಟ್ಟು ಬಲಗೈಯಲ್ಲಿ ಪುಷ್ಪವನ್ನು ಹಿಡಿದು ಒಬ್ಬರು ಸ್ವರ್ಗವನ್ನು ನೋಡುತ್ತಿರುವ ಹಾಗೆ ಮೂಡಿದೆ. ಕೆಂಪು ಹಿನ್ನೆಲೆಯ ಮೇಲೆ ಈ ಚಿತ್ರ ರಚನೆಯಾಗಿದೆ. ಅಲ್ಲದೆ ಬೃಹತ್ತಾದ ಮಂಟಪಕ್ಕೆ ಬಿಳಿವರ್ಣ ಉಪಯೋಗಿಸಿ ಕಪ್ಪು ರೇಖೆಯನ್ನು ಬಿಡಿಸಲಾಗಿದೆ. ರಾಧೆಯ ಸೀರೆ ಹಾಗೂ ಕುಪ್ಪಸದಲ್ಲಿ ಚುಕ್ಕೆಗಳು ಕಂಡುಬಂದು ಇಬ್ಬರ ನೋಟವೂ ಒಂದೇಯಾಗಿದೆ.

**೨೫. ಯಮುನಾ ನದಿತೀರದಲ್ಲಿ ಗೋಪಿಕೆಯರ ಜೊತೆ ನರ್ತಿಸುತ್ತಿರುವ ಕೃಷ್ಣ (ಚಿತ್ರ ಸಂ. ೩೪)**

ಇಲ್ಲಿ ಕೃಷ್ಣನು ಮಧ್ಯದಲ್ಲಿ ಕುಳಿತಿದ್ದು ಸುತ್ತಲೂ ಗೋಪಿಕಾ ಸ್ತ್ರೀಯರು ನೃತ್ಯಮಾಡುತ್ತಿದ್ದಾರೆ. ಕೃಷ್ಣನ ಒಟ್ಟು ಎರಡು ವಿದ್ದು ಚಿತ್ರವಿದ್ದು ಹತ್ತು ಮಹಿಳಾ ಗೋಪಿಕಾ ಸ್ತ್ರೀಯರು ನೃತ್ಯದಲ್ಲಿ ಭಾಗಿಯಾಗಿದ್ದಾರೆ. ಕೃಷ್ಣನು ನೀಲಿ ಮೈಬಣ್ಣಹೊಂದಿ ಕಿರೀಟಾಭರಣಧಾರಿಯಾಗಿದ್ದಾನೆ. ಕೆಂಪು ವಸ್ತ್ರಹಾಗೂ ಹಳದಿ ಪಂಚೆ ತೊಟ್ಟ ಕೃಷ್ಣನ ಮಧ್ಯದಲ್ಲಿರುವ ಗೋಪಿಕಾಸ್ತ್ರೀಯರು ಹಳದಿ, ನೀಲಿ, ಗುಲಾಬಿ ಬಣ್ಣದ ಸೀರೆಯುಟ್ಟು, ಹಸಿರು, ಹಳದಿ ಕುಪ್ಪಸ ತೊಟ್ಟದ್ದಾರೆ. ಇಲ್ಲಿ ಮೊದಲನೆಯ ಕೃಷ್ಣನು ಎಡಕ್ಕೆ ಮುಖಮಾಡಿ ಕುಳಿತಿದ್ದಾನೆ. ಎರಡನೆಯ ಕೃಷ್ಣನು ಬಲಕ್ಕೆ ಮುಖಮಾಡಿಕುಳಿತ್ತಿದ್ದಾನೆ.

ಮೇಲ್ಭಾಗ ಮತ್ತು ಕೆಳಭಾಗದ ಸ್ತ್ರೀಯರು ಕೃಷ್ಣನನ್ನು ನೋಡುತ್ತಾ ನೃತ್ಯದಲ್ಲಿ ತೊಡಗಿದ್ದಾರೆ. ಹಾಗೂ ಮತ್ತೆರಡು ಗೋಪಿಕಾಸ್ತ್ರೀಯರು ಪ್ರತ್ಯಕವಿದ್ದು ಕಂಡುಬಂದು ಈ ಚಿತ್ರದ ಮುಂದಿನ ಸಾಲು ನಾಶವಾಗಿರುವ ಹಂತವನ್ನು ಸೂಚಿಸುತ್ತದೆ. ಇಲ್ಲಿಯ ಗೋಪಿಕಾಸ್ತ್ರೀಯರು ಆಭರಣಧಾರಿಯಾಗಿ ಮೂಡಿಬಂದು ಮೂಗಿನಲ್ಲಿರುವ ನತ್ತನ್ನು ಬಳೆಯಾಕಾರ ದೊಡ್ಡದಾಗಿ ಮೂಡಿಬಂದಿದೆ. ಈ ನೃತ್ಯವು ಯಮುನಾ ತೀರದ ನೃತ್ಯವನ್ನು ಹೋಲುತ್ತದೆ.



## ೨೫. ಕೃಷ್ಣನ ಕಲ್ಪನಾ ಲೋಕದಲ್ಲಿ ರಾಧೆ (ಚಿತ್ರ ಸಂ. ೩೫)

ಕೃಷ್ಣನ ಪ್ರೀತಿ ಪಾತ್ರಳಾದ ಲಕ್ಷ್ಮೀದೇವಿಯ ಎರಡು ಆಕಾರಗಳಲ್ಲಿ ಈಕೆಯೂ ಒಬ್ಬಳೆಂದು ಪರಿಗಣಿಸಲಾಗಿದೆ. ಅಲ್ಲದೆ ಇಲ್ಲಿ ರಾಧೆಯು ತೆಳು ಹಳದಿ ಮೈಬಣ್ಣ ಹೊಂದಿ ಆಭರಣಧಾರಿಯಾಗಿದ್ದಾಳೆ. ಬಲಗಾಲನ್ನು ಡೊಂಕಿಸಿ ಬಲಗೈಯನ್ನು ತಲೆಯ ಮೇಲೆ ಒಯ್ದು ಕೈಯಿಂದ ಧಾರದ ಹಾಗೆ ಇಳಿಬಿದ್ದಿರುವುದರ ಹಾಗೆ ಗೋಚರಿಸುತ್ತದೆ. ಎಡಗೈಯಲ್ಲಿ ಎಸಳನ್ನು ತುದಿಬೆರಳುಗಳಲ್ಲಿ ಹಿಡಿದಿರುವ ಹಾಗೆ ಮೂಡಿಬಂದಿದೆ. ರಾಧೆಯ ಕುಪ್ಪಸವು ಹಳದಿ ವರ್ಣದಿಂದ ಕೂಡಿದೆ ಮೆಲ್ಭಾಗದಲ್ಲಿ ಕೆಂಪುವರ್ಣದ ರೇಖೆಗಳು ಕುಪ್ಪಸದಿಂದ ಹೊರಬಂದಿದ್ದು ಅಲ್ಲದೆ. ಎರಡು ಸ್ತನಗಳ ಮಧ್ಯದಲ್ಲಿ ಕುಪ್ಪಸವು ಕತ್ತರಿಸಿದ ಹಾಗೆ ಕಂಡುಬರುತ್ತದೆ. ತೆಳುವಾದ ಸೊಂಟ ಹೊಂದಿದ ರಾಧೆಯು ಕೆಂಪು ಸೀರೆತೊಟ್ಟದ್ದು ಕಂಡುಬರುವುದರೊಂದಿಗೆ, ಬಲಗಡೆ ಮುಖಮಾಡಿ ಕೃಷ್ಣನನ್ನು ನೆನಪಿಸಿಕೊಳ್ಳುತ್ತಿದ್ದು ಬಹುಶಃ ಕೃಷ್ಣನ ಬರುವಿಕೆಗಾಗಿ ಕಾಯುತ್ತಿರುವ ಹಾಗಿದೆ. ಇಲ್ಲಿ ರಾಧೆಯು ಸುಂದರವಾಗಿದ್ದು, ತೆಳು ಹಳದಿ ವರ್ಣ ಲೇಪನದ ಮೇಲೆ ಈ ಚಿತ್ರಮೂಡಿಬಂದಿದೆ. ರಾಧೆಯ ಹಿನ್ನೆಲೆ ಖಾಲಿಜಾಗವನ್ನು ಮರ, ಎಲೆ, ಹಣ್ಣುಗಳಿಂದ ತುಂಬಿಸಲಾಗಿದೆ. ಇಲ್ಲಿ ಗಿಡಕ್ಕೆ ದಟ್ಟಹಸಿರು ಎಲೆಗಳಿಗೂ ದಟ್ಟಹಸಿರು,ಹಣ್ಣುಗಳಿಗೆ ಮಾತ್ರ ತಿಳಿಗುಲಾಬಿ ವರ್ಣಉಪಯೋಗಿಸಲಾಗಿದೆ.

## ೨೬. ಕೃಷ್ಣನ ರಾಸಲೀಲೆ (ಚಿತ್ರ ಸಂ. ೩೬)

ಹಲವಾರು ಗೋಪಿಕಾ ಸ್ತ್ರೀಯರ ಮಧ್ಯದಲ್ಲಿ ಕೃಷ್ಣನು ರಾಸಲೀಲೆಯ ನೃತ್ಯದಲ್ಲಿ ತೊಡಗಿದ್ದಾನೆ. ಎಲ್ಲ ಗೋಪಿಕಾ ಸ್ತ್ರೀಯರು ಮೈಬಣ್ಣ ಹಳದಿ ವರ್ಣವಾಗಿದ್ದರೆ, ಕೃಷ್ಣನು ನೀಲಿಮೈಬಣ್ಣ ಹೊಂದಿದ್ದಾನೆ. ಇಲ್ಲಿ ಇಬ್ಬರು ಕೃಷ್ಣರು ರಚನೆಯಾಗಿದ್ದು, ಇಬ್ಬರು ಎದುರು ಬದುರು ನೋಡುವಹಾಗೆ ಮೂಡಿಬಂದಿದ್ದಾರೆ. ಆಭರಣಧಾರಿಯಾದ ಇವರು ಮಧ್ಯದಲ್ಲಿ ಮೊಳಕಾಲು ಕೆಳವೂರಿ ಕುಳಿತು ನೃತ್ಯಮಾಡುತ್ತಿರುವುದು ಕಂಡುಬರುತ್ತದೆ. ಸುತ್ತಲೂ ಗೋಪಿಕಾಸ್ತ್ರೀಯರು ಹಲವಾರು ಭಂಗಿಯಲ್ಲಿ ನೃತ್ಯಮಾಡುತ್ತಾ ಕೃಷ್ಣನ ಕೈ ಮತ್ತು ಕಾಲುಗಳನ್ನು ಹಿಡಿದಿದ್ದಾರೆ. ಗೋಪಿಕಾಸ್ತ್ರೀಯರು. ಕೆಂಪು. ತೆಳುನೀಲಿ. ಹಸಿರು. ಹಳದಿ ಸೀರೆಯನ್ನು ತೊಟ್ಟಿದ್ದಾರೆ. ಹಾಗೆ ಕುಪ್ಪಸದಲ್ಲಿಯೂ ಇದನ್ನೇ ಕಾಣಬಹುದು. ಎಲ್ಲರ ಸೀರೆ. ಕುಪ್ಪಸದಲ್ಲಿ ಚುಕ್ಕೆ. ಹಾಗೂ ರೇಖೆಗಳು ಕಂಡುಬರುತ್ತವೆ. ಇಲ್ಲಿಯ ಕೆಲವೊಂದು ಸ್ತ್ರೀಯರಿಗೆ ಒಂದು ಸ್ತನವನ್ನು ವೃತ್ತಾಕಾರವಾಗಿ ರಚಿಸಿದ್ದು ಕಂಡುಬಂದಿದೆ. ಎಲ್ಲರ ಮೂಗಿನಲ್ಲಿರುವ ಮೂಗುತಿಯು ವಿಷೇಶವಾಗಿ ಕಂಡುಬಂದಿವೆ. ಈ ಚಿತ್ರದಲ್ಲಿ ಒಂದೇ ಮರದ ಟೊಂಗೆಯು ರಚನೆಯಾಗಿದ್ದು ಇದು ಹಸಿರು ವರ್ಣದಲ್ಲಿ ಮೂಡಿದೆ. ಈ ಚಿತ್ರಗಳ ಹಿನ್ನೆಲೆಯಾಗಿ ತೆಳು ಹಳದಿವರ್ಣವನ್ನೇ ಬಳಸಿದ್ದಾರೆ.

## ೨೭. ಕೃಷ್ಣನ ರಾಸಲೀಲೆ (ಚಿತ್ರ ಸಂ. ೩೭)

ಇಲ್ಲಿ ಒಟ್ಟು ನಾಲ್ಕು ದೃಶ್ಯಗಳು ಕಂಡುಬಂದು ಎಲ್ಲವೂ ಒಂದೆ ಭಂಗಿಯಲ್ಲಿವೆ. ಎಲ್ಲ ಭಂಗಿಯಲ್ಲಿ ಕೃಷ್ಣನು ಮಧ್ಯಕುಳಿತು ನೀಲಿ ಮೈಬಣ್ಣ ಕೆಂಪು ವಸ್ತ್ರ ಹಳದಿ ಪಂಚೆ ತೊಟ್ಟು ಕಿರೀಟಾಭರಣಧಾರಿಯಾಗಿದ್ದಾನೆ. ಎರಡು ಕಾಲು ಮಡಚಿಕುಳಿತ ಕೃಷ್ಣನ ಅಕ್ಕ ಪಕ್ಕದಲ್ಲಿಯ ಗೋಪಿಕಾ ಸ್ತ್ರೀಯರ ಕೈಯನ್ನು ಹಿಡಿದಿದ್ದಾನೆ. ಎಲ್ಲ



ಗೋಪಿಕಾ ಸ್ತ್ರೀಯರು ಕೆಂಪು, ಹಳದಿ, ಹಸಿರು, ಸೀರೆ, ಹಾಗೂ ಕುಪ್ಪಸವನ್ನು ತೊಟ್ಟಿದ್ದಾರೆ. ಆಭರಣಧಾರಿಯಾದ ಈ ಸುಂದರಿಯರು ಕೃಷ್ಣನನ್ನು ನೋಡುತ್ತಾ ಕೈ ಹಿಡಿದು ಬಾಗಿ ನೃತ್ಯ ಮಾಡುತ್ತಿದ್ದಾರೆ. ಹೀಗೆ ಒಂದರಮೇಲೊಂದು ಚಿತ್ರ ಮೂಡಿಬಂದಿವೆ. ಈ ಎಲ್ಲಾಚಿತ್ರಗಳ ಹಿನ್ನೆಲೆಯಲ್ಲಿ ತೆಳು ಹಳದಿ ಬಣ್ಣ ಬಳೆಯಲಾಗಿದೆ.

**೨೮. ಸಂಭ್ರಮಿಸುತ್ತಿರುವ ಗೋಪಿಕೆಯರು (ಚಿತ್ರ ಸಂ. ೩೮)**

ಇಲ್ಲಿ ಒಟ್ಟಾರೆ ಮೂವರು ಸ್ತ್ರೀಯರು ಹಾಗೂ ಹೂಬಳ್ಳಿಗಳು ರಚನೆಯಾಗಿವೆ. ಮೊದಲನೆಯವಳು ತೆಳುಗುಲಾಬಿ ಸೀರೆ. ತೊಟ್ಟರೆ ಮಧ್ಯದವಳು ಕೆಂಪು ಸೀರೆ ಹಾಗೂ ಕೊನೆಯವಳು ತೆಳುಗುಲಾಬಿ ಸೀರೆ ಹಾಗೆ ಮೊದಲು ಮತ್ತು ಮಧ್ಯದ ಗೋಪಿಕಾಸ್ತ್ರೀಯರು ಹಳದಿ ಕುಪ್ಪಸ ತೊಟ್ಟಿದ್ದಾರೆ. ಮೂವರು ಆಕಾಶದಲ್ಲಿ ಹಾರುವ ಭಂಗಿಯಲ್ಲಿ ಕಂಡುಬಂದಿದ್ದಾರೆ. ಹಿನ್ನಲೆಯಲ್ಲಿ ಹೂಗಳು ಬಳ್ಳಿಗಳು ರಚನೆಯಾಗಿವೆ. ಗೋಪಿಕಾ ಸ್ತ್ರೀಯರು  ಆಭರಣಧಾರಿಯಾಗಿರುವುದರೊಂದಿಗೆ ಸೀರೆಗಳಲ್ಲಿ ಚುಕ್ಕೆಗಳನ್ನು ಬಿಡಿಸಲಾಗಿದೆ. ಈ ಗೋಪಿಕಾ ಸ್ತ್ರೀಯರು ಒಂದು ಕೈ ಮೇಲಕ್ಕೆ ಒಂದು ಕೈ ಹಿಂದಕ್ಕೆ ಒಯ್ದು ದೇವತಾ ಸ್ತ್ರೀಯರ ಹಾಗೆ ಕಾಣಬರುತ್ತಾರೆ. ಮೂಗಿನಲ್ಲಿರುವ ಮೂಗುತಿಯು ರಿಂಗಿನಾಕಾರ ಹಾಗೂ ರಚನೆಯಾಗಿದ್ದು, ಇಬ್ಬರು ಎಡಗಡೆ ಮುಖಮಾಡಿದರೆ ಒಬ್ಬಳೂ ಬಲಗಡೆ ಮುಖಮಾಡಿದ ಹಾಗೆ ಈ ಚಿತ್ರಮೂಡಿಬಂದಿದೆ. ದಟ್ಟ ಹಸಿರು ವರ್ಣದ ಗಿಡವ ಟೊಂಗೆ ಹಾಗೂ ಎಲೆಗಳು ಮೂಡಿಬಂದಿವೆ. ಹಾಗೆ ಈ ಚಿತ್ರವು ತೆಳು ಹಳದಿ ವರ್ಣದ ಮೇಲೆ ರಚನೆಯಾಗಿವೆ.

**೨೯. ರಾಸಲೀಲೆ: ನರ್ತಿಸುತ್ತಿರುವ ಕೃಷ್ಣ ಹಾಗೂ ಗೋಪಿಕೆಯರು (ಚಿತ್ರ ಸಂ. ೩೯)**

ಒಟ್ಟಾರೆಯಾಗಿ ಇಲ್ಲಿ ಎರಡು ಸನ್ನಿವೇಶಗಳು ರಚನೆಯಾಗಿದ್ದು ಎರಡರಲ್ಲಿಯೂ ಭಾವಭಂಗಿಗಳು ಒಂದೇ ತೆರನಾಗಿವೆ. ಇಲ್ಲಿ ಕೃಷ್ಣನು ಮಧ್ಯದಲ್ಲಿ ಕುಳಿತು ನೃತ್ಯಮಾಡುತ್ತಿರುವದು ಗೋಪಿಕಾಸ್ತ್ರೀಯರಿಗ ತನ್ನ ಎರಡು ಕೈಗಳನ್ನು ನೀಡಿದ್ದಾನೆ. ನೀಲಿಮೈಬಣ್ಣ, ಹಳದಿ ಪಂಚೆತೊಟ್ಟು ಕಾಲು ಮಡಚಿ ಕುಳಿತಿದ್ದಾನೆ. ಅಕ್ಕಪಕ್ಕದ ಗೋಪಿಕಾ ಸ್ತ್ರೀಯರು ಕೆಂಪು ಹಾಗೂ ತಿಳಿಗುಲಾಬಿ ಸೀರೆ ತೊಟ್ಟು ಆಭರಣಧಾರಿಯಾಗಿ ನೃತ್ಯದಲ್ಲಿ ತೊಡಗಿದ್ದಾರೆ. ಇಲ್ಲಿ ಇಬ್ಬರ ನೋಟವು ಕೃಷ್ಣನ ಮೇಲಿದ್ದು ಇಬ್ಬರು ಎಡಗೈ ಮೇಲೆ ಒಯ್ದು ಕೂಡಿಸಿದ್ದಾರೆ. ಇದರಲ್ಲಿ ಇನ್ನೊಂದು ದೃಶ್ಯವೂ ಇದೇಯಾಗಿದೆ. ಆದರೆ ಇಲ್ಲಿ ಗೋಪಿಕಾ ಸ್ತ್ರೀಯರ ಸೀರೆಯೂ ಕೆಂಪಾಗಿರುವುದಾಗಿವೆ. ಮೇಲೆಹೇಳಿದ ಭಾವ ಭಂಗಿಯೂ ಸಹ ಇಲ್ಲಿಯೂ  ಮೂಡಿಬಂದಿದೆ. ವಿಶೇಶವಾಗಿ ಇಲ್ಲಿ ಎಡ ಗೋಪಿಕಾ ಸ್ತ್ರೀಯ ಸ್ತನವು ಒಂದೇ ರಚನೆಯಾಗಿದ್ದು ವಿಶೇಶವಾಗಿದೆ. ಈ ಚಿತ್ರಗಳು ತೆಳುಹಳದಿ ಹಿನ್ನೆಲೆಯ ಲೇಪನದ ಮೇಲೆ ಮೂಡಿಬಂದಿವೆ. ಚಿತ್ರದ ಸುತ್ತಲೂ ಕಾಗದ ಕಿತ್ತಿರುವುದು ಕಂಡುಬಂದಿದೆ. ಈ ಚಿತ್ರಗಳು ಹೆಚ್ಚಾಗಿ ರೇಖಾ ಪ್ರಧಾನವಾಗಿವೆ ಅಲ್ಲದೆ ಚುಕ್ಕೆಗಳಿಂದ ತುಂಬಿಕೊಂಡಿವೆ.

**೩೦. ಕೃಷ್ಣನ ಕೊಳಲು ವಾದನವನ್ನು ಆಲಿಸುತ್ತಿರುವ ಗೋವುಗಳು (ಚಿತ್ರ ಸಂ. ೪೦)**

ಇಲ್ಲಿ ಕೃಷ್ಣನು ಕೊಳಲನ್ನು ಊದುತ್ತಿರುವುದು ಕಂಡುಬಂದು ಕೃಷ್ಣನ ಮೈಬಣ್ಣ ನೀಲಿವರ್ಣದ್ದಾಗಿದೆ. ಕಿರೀಟಾಭರಣಧಾರಿಯಾದ ಕೃಷ್ಣನ ಕೊಳಲಿನ ಸಂಗೀತವನ್ನು  ಗೋವುಗಳೆಲ್ಲ ಆಲಿಸುತ್ತಿವೆ. ಹಳದಿ ಪಂಚೆತೊಟ್ಟ ಕೃಷ್ಣ ಅದರಲ್ಲಿ ರೇಖೆಗಳು ಬಿಳಿಚುಕ್ಕೆಗಳು ರಚನೆಯಾಗಿವೆ. ನಡುವಿನಿಂದ ಕತ್ತಿನವರೆಗೆ ಚಲಿಸಿ ಅಲ್ಲಿಂದ ಮೊಳಕಾಲು ಭಾಗದವರೆಗೆ ಇಳಿಬಿದ್ದ ವಸ್ತ್ರ ಕೆಂಪು ಬಣ್ಣದ್ದಾಗಿದೆ. ಇದು ಹಳದಿ ದಡಿಯನ್ನು ಹೊಂದಿದೆ



ಯಲ್ಲದೇ ವಿವಿಧ ರೇಖೆ ಹಾಗೂ ಚುಕ್ಕಿಗಳನ್ನು ಒಳಗೊಂಡಿದೆ. ಕೃಷ್ಣನ ಹಿಂದೆ ಬೃಹತ್ತಾದ ಕಮಾನಿನಹಾಗೆ ಹಳದಿ ವರ್ಣದ ವಸ್ತ್ರವು ಇದ್ದು ಅದರಲ್ಲಿ ಕಪ್ಪು ವರ್ಣದ ಚುಕ್ಕಿಗಳು ಕಂಡು ಬಂದಿವೆ. ಎಲ್ಲಿ ಒಟ್ಟು ಏಳು ಗೋವುಗಳಿದ್ದು ಮೂರು ಬಿಳಿವರ್ಣ ಎರಡು ಹಳದಿ ವರ್ಣ ಎರಡು ತಿಳಿಗುಲಾಬಿಯಲ್ಲಿ ರಚನೆಯಾಗಿವೆ. ಎಲ್ಲ ಗೋವುಗಳಲ್ಲಿ ಕೊರಳಲ್ಲಿ ಗಂಟೆಗಳ ಸರವಿದ್ದು ಇವು ಕೃಷ್ಣನ ಕೊಳಲಿನ ಸಂಗೀತವನ್ನು ಆಲಿಸುತ್ತಿರುವ ಹಾಗೆ ಎಕಚಿತ್ತದಿಂದ ಮೂಡಿಬಂದಿವೆ. ಹಿನ್ನೆಲೆ ಲೇಪನವಾಗಿ ದಟ್ಟ ನೀಲಿ ಬಳಿದು ಬಿಳಿ ವರ್ಣದ ಎಲೆ ಹೂಗಳು ಅಲ್ಲಲ್ಲಿ ಮೂಡಿಬಂದಿವೆ.

**೩೧. ಗೋಪಿಕೆಯರ ನೃತ್ಯ (ಚಿತ್ರ ಸಂ. ೪೧)**

ಇಲ್ಲಿ ಗೋಪಿಕಾ ಸ್ತ್ರೀಯರು ನೃತ್ಯ ಮಾಡುತ್ತಿರುವ ಚಿತ್ರಗಳು ಮೂಡಿಬಂದಿವೆ. ಒಟ್ಟು ಮೂರು ಸ್ತ್ರೀಯರು ನೃತ್ಯ ಮಾಡುತ್ತಿದ್ದು ಮೊದಲನೆಯವಳು ತೆಳು ಗುಲಾಬಿ ವರ್ಣದ ಸೀರೆತೊಟ್ಟು ಕೆಂಪು ಕುಪ್ಪಸ ತೊಟ್ಟಿದ್ದಾಳೆ. ಕೊರಳಲ್ಲಿ ಬಿಳಿಮುತ್ತಿನ ಹಾರ ಕಂಡುಬಂದು ಮೂಗುತಿ, ಕಿವಿಯೋಲೆ, ಇತ್ಯಾದಿ ಆಭರಣಗಳು ಮೂಡಿಬಂದಿವೆ. ಮೂವರು ಸ್ತ್ರೀಯರು ವಿವಿಧ ಭಾವಭಂಗಿಯಲ್ಲಿ ಕಂಡುಬಂದು ಮೊದಲನೆಯ ಸ್ತ್ರೀ ಎಡಕ್ಕೆ ಮೂಖಮಾಡಿ ಕೈಯಲ್ಲಿ ಕೋಲಿನ ಹಾಗೆ ಗೋಚರಿಸುವ ಹಾಗಿದೆ. ಮಧ್ಯದಲ್ಲಿಯ ಸ್ತ್ರೀಯು ಎಲ್ಲಾ ಆಭರಣಗಳನ್ನು ಹೊಂದುವುದರೊಂದಿಗೆ ಬಲಕ್ಕೆ ಮುಖಮಾಡಿ ನಿಂತಿದ್ದಾಳೆ ಇವಳ ಕೈಯಲ್ಲಿಯೂ ಕೋಲನ್ನು ಚಿತ್ರಿಸಿದ್ದು ಕಾಣಬರುತ್ತದೆ. ಕೊನೆಯ ಸ್ತ್ರೀಯು ತಿಳು ಗುಲಾಬಿ ಕೆಂಪು ಕುಪ್ಪಸ ತೊಟ್ಟಿದ್ದು ಮಾತ್ರವಲ್ಲದೆ ಆಭರಣಧಾರಿಯಾಗಿದ್ದಾಳೆ. ಇವಳು ಎಡಕ್ಕೆ ಮೂಖಮಾಡಿನಿಂತಿದ್ದಾಳೆ. ಮೂವರು ಸ್ತ್ರೀಯರುಗಳಲ್ಲಿ ಮಧ್ಯದ ಸ್ತ್ರೀಯು ಕೆಂಪು ಸೀರೆ ತೊಟ್ಟು ಕೆಂಪು ಕುಪ್ಪಸ ತೊಟ್ಟಿದ್ದಾಳೆ. ಇವಳ ಸೀರೆಯಲ್ಲಿ ರೇಖೆಗಳು ಪ್ರಧಾನವಾಗಿವೆ.ಅಕ್ಕ ಪಕ್ಕದ ಗೋಪಿಕಾಸ್ತ್ರೀಯರಲ್ಲಿ ಬಿಳಿವರ್ಣದ ರೇಖೆಗಳಿದ್ದು ಸಣ್ಣಸಣ್ಣ ಚುಕ್ಕೆಗಳು ಮೂಡಿಬಂದಿವೆ. ಒಟ್ಟು ಈ ಕಲಾಕೃತಿಯಲ್ಲಿ ಖಾಲಿ ಜಾಗವನ್ನು ದಟ್ಟ ಹಸಿರು ವರ್ಣದ ಎಲೆ ಮತ್ತು ಕೆಂಪು ವರ್ಣದ ದೊಡ್ಡ ಹೂಗಳನ್ನು ಚಿತ್ರಿಸಲಾಗಿದೆ.

**೩೨. ರಾಸಲೀಲೆಯಲ್ಲಿ ಕೃಷ್ಣ ಮತ್ತು ಗೋಪಿಕೆಯರು (ಚಿತ್ರ ಸಂ. ೪೨)**

ಕೃಷ್ಣನ ಪ್ರಮುಖತ್ವದಲ್ಲಿ ನಡೆದ ರಾಸಲೀಲೆಯ ಈ ನೃತ್ಯದಲ್ಲಿ ಕೃಷ್ಣನು ಮಧ್ಯದಲ್ಲಿ ಮೊಳಕಾಲೂರಿ ಕುಳಿತು ನೃತ್ಯಮಾಡುತ್ತಿರುವುದು ಸುತ್ತಲೂ ಸಹಪಾಠಿಗಳ ಹಾಗೆ ಗೋಪಿಕಾ ಸ್ತ್ರೀಯರು ನೃತ್ಯಮಾಡುತ್ತಿರುವುದು ಕಂಡುಬಂದಿದೆ. ಇಲ್ಲಿ ಕೃಷ್ಣನ ಮೈಬಣ್ಣ ನೀಲಿ. ಹಾಗೂ ಪಂಚೆಯು ಹಳದಿ ವರ್ಣದ್ದಾಗಿದೆ. ಕಿರೀಟಾಭರಣಧಾರಿಯಾದ ಕೃಷ್ಣನು ಕೆಂಮ ವಸ್ತ್ರ ಧರಿಸಿದ್ದಾನೆ. ಗೋಪಿಕಾ ಸ್ತ್ರೀಯರ ವಸ್ತ್ರವಿನ್ಯಾಸಗಳಲ್ಲಿ ಸಾಮಾನ್ಯವಾಗಿ ಹಸಿರು, ಹಳದಿ, ತೆಳುನೀಲಿ, ಕೆಂಮ ಜಾಂಬಳಿ, ಅಲ್ಲದೆ ಇದೇ ವರ್ಣಗಳ ಕುಪ್ಪಸಗಳು ರಚನೆಯಾಗಿವೆ. ಇಲ್ಲಿ ಒಟ್ಟು ಮೂರು ದೃಶ್ಯಗಳು ಮೂಡಿಬಂದು ಎಲ್ಲದರಲ್ಲೂ ಒಂದೇ ಭಾವ ಭಂಗಿಯನ್ನು ಕಾಣಬಹುದಾಗಿದೆ. ಈ ಎಲ್ಲಾ ಚಿತ್ರಗಳು ಒಂದರ ಮೇಲೊಂದರಂತೆ ಚಿತ್ರಿತವಾಗಿವೆ ಉದ್ದವಾದ ಪಟ್ಟಿಕೆಯಲ್ಲಿ ಈ ಚಿತ್ರಗಳು ರಾರಾಜಿಸುತ್ತವೆ. ಸುಂದರ ಅಲಂಕಾರದಿಂದ ಕೂಡಿದ ಈ ಚಿತ್ರಗಳು ಇಂದು ನಾಶವಾಗುವ ಹಂತದಲ್ಲಿವೆ.



**೩೩ . ಕೃಷ್ಣನ ಸರಸ-ಸಲ್ಲಾಪ (ಚಿತ್ರ ಸಂ. ೪೩)**

ಇಲ್ಲಿ ಒಟ್ಟು ಮೂರು ದೃಶ್ಯಗಳು ಮೂಡಿಬಂದಿದ್ದು ಒಂದೊಂದರಲ್ಲಿಯೂ ಒಂದೊಂದು ವಿಷಯ ಅಡಗಿದೆ. ಮೊದಲನೆಯದರಲ್ಲಿ ರಾಧೆಗೆ ಸಮಾಧಾನ ಪಡೆಸುವ ಕೃಷ್ಣ, ಎರಡನೆಯದರಲ್ಲಿ ರಾಧೆಯು ಕೃಷ್ಣನ ಕಿವಿಯನ್ನು ಹಿಡಿದು ಶಿಕ್ಷಿಸುತ್ತಿರುವ ದೃಶ್ಯ. ಮೂರನೆಯದರಲ್ಲಿ ಕೃಷ್ಣನ ಕಾಲನ್ನು ಒತ್ತುತ್ತಿರುವುದು ಕಂಡುಬಂದಿದೆ. ಈ ಎಲ್ಲಾ ಚಿತ್ರಗಳಿಗೂ ಪ್ರತ್ಯೇಕವಾದ ಮಂಟಪವು ಸೃಷ್ಟಿಸಿಕೊಂಡು ನೋಡುವುದಕ್ಕೆ ಒಂದು ಮಂಟಪದ ಮೇಲೆ ಮತ್ತೊಂದು ಮಂಟಪ ಎನ್ನುವ ಕಲ್ಪನೆ ಮೂಡುತ್ತದೆ. ಪ್ರಥಮ ಚಿತ್ರದಲ್ಲಿ ರಾಧೆಯನ್ನು ಸಮಾದಾನ ಮಾಡುತ್ತಿರುವ ಕೃಷ್ಣನು ಕಿರೀಟಾಭರಣಧಾರಿಯಾಗಿ ರಾಧೆಯ ಕೈಯನ್ನು ಹಿಡಿದು ಅವಳಿಗೆ ಹಲವಾರು ತಿಳುವಳಿಕೆಯ ವಿಚಾರಗಳನ್ನು ತಿಳಿಸುತ್ತಿರುವ ಹಾಗೆ ಮೂಡಿಬಂದಿದೆ. ನೀಲಿ ಮೈಬಣ್ಣ ಹಳದಿ ಪಂಚೆ ತೊಟ್ಟ ಕೃಷ್ಣನು ಗಂಭೀರವಾಗಿ ರಾಧೆಯ ಮುಖವನ್ನು ನೋಡುತ್ತಾ ಇದ್ದಾನೆ.

ರಾಧೆಯ ತೆಳು ಗುಲಾಬಿ ವರ್ಣದ ಸೀರೆ ತೊಟ್ಟು ಎಡಕ್ಕೆ ಮುಖತಿರುವಿ ಕೃಷ್ಣನ ಯಾವ ಮಾತುಗಳನ್ನು ಲೆಕ್ಕಿಸದೆ ಕಾಲನ್ನು ಡೊಂಕುಮಾಡಿ. ನಿಂತಿದ್ದಾಳೆ. ಹಾಗೆ ಎರಡನೆಯ ದೃಶ್ಯದಲ್ಲಿ ರಾಧೆಯು ಕೃಷ್ಣನು ಮನಃವೊಲಿಸಲು ಪ್ರಯತ್ನಿಸುತ್ತಿರುವಂತೆ ಇಲ್ಲಿ ರಾಧೆಯು ಹಳದಿ ಸೀರೆ ಕೆಂಪು ಕುಪ್ಪಸ ತೊಟ್ಟು ಮಂಚದ ಮೇಲೆ ಕುಳಿತ ಕೃಷ್ಣನನ್ನು ಮಾತನಾಡಿಸುತ್ತಿದ್ದಾಳೆ. ಕೃಷ್ಣನು ಅವಳ ಮಾತಿಗೆ ಅಳುಕಾಡದೆ ಬಲಕ್ಕೆ ತಿರುಗಿದ್ದಾನೆ. ರಾಧೆಯು ಅವನ ಕಿವಿಯನ್ನು ಹಿಡಿದಿರುವ ಹಾಗೆ ಮತ್ತು ಬಲಗೈಯಿಂದ ಅವನ ಬಲಗೈಯನ್ನು ಹಿಡಿದು ಇತ್ತ ಕಡೆ ನೋಡು ಎನ್ನುತ್ತಿರುವ ಹಾಗೆ ಈ ಚಿತ್ರ ಮೂಡಿಬಂದಿದೆ. ಕಿರೀಟಾಭರಣಧಾರಿಯಾದ ಕೃಷ್ಣ ನೀಲಿ ಮೈಬಣ್ಣಹೊಂದಿ ಹಳದಿ ಪಂಚೆಯುಟ್ಟಿದ್ದಾನೆ. ಕೊನೆಯ ದೃಶ್ಯದಲ್ಲಿ ಇಬ್ಬರು ಒಂದುಗೂಡಿ ಮಂಟಪದ ಮೇಲೆ ಕುಳಿತು ವಿರಾಮಿಸುತ್ತಿರುವುದು ಕಂಡುಬಂದಿದೆ. ಇಲ್ಲಿ ರಾಧೆಯು ಬಿಳಿಸೀರೆ ಗುಲಾಬಿ ಕುಪ್ಪಸ ತೊಟ್ಟು ಕೃಷ್ಣನ ಮುಖವನ್ನು ನೋಡುತ್ತಾ ಅವನ ಕಾಲನ್ನು ಒತ್ತುತ್ತಿದ್ದಾಳೆ. ಕೃಷ್ಣನು ಬಲಗಾಲನ್ನು ಅವಳ ತೊಡೆಯಮೇಲೆ ಚಾಚಿ ಕುಳಿತಿರುವುದಲ್ಲದೆ. ಕೈಯಲ್ಲಿ ಎನೋ ಹಿಡಿದಿರುವ ಹಾಗೆ ಕಂಡುಬಂದಿದೆ. ಈ ಎಲ್ಲಾ ಚಿತ್ರಗಳ ಹಿನ್ನೆಲೆಯಲ್ಲಿ ಕಪ್ಪನ್ನು ಉಪಯೋಗಿಸಲಾಗಿದೆ. ಹಾಗೆ ಮಂಟಪವೂ ಬಿಳಿ ವರ್ಣದಲ್ಲಿ ಮೂಡಿಬಂದು ರೇಖಾ ಪ್ರಧಾನವಾಗಿದೆ.

**೩೪. ಕೃಷ್ಣನನ್ನು ಮನವೊಲಿಸುತ್ತಿರುವ ರಾಧೆ ಹಾಗೂ ಕೃಷ್ಣನಿಗೆ ಗಾಳಿ ಬಿಸುತ್ತಿರುವುದು (ಚಿತ್ರ ಸಂ. ೪೪)**

ಇಲ್ಲಿ ಒಂದೇ ಪಟ್ಟಿಕೆಯಲ್ಲಿ ಎರಡು ದೃಶ್ಯಗಳು ಮೂಡಿಬಂದಿವೆ. ಮೊದಲನೆ ದೃಶ್ಯದಲ್ಲಿ ಕೃಷ್ಣನನ್ನು ಮನಃವೋಲಿಸುವ ಪ್ರಯತ್ನದಲ್ಲಿ ರಾಧೆ ಎರಡನೆಯ ದೃಶ್ಯದಲ್ಲಿ ಕೃಷ್ಣನಿಗೆ ಗಾಳಿಬಿಸುತ್ತಿರುವುದಾಗಿದೆ. ಎರಡು ದೃಶ್ಯಗಳಿಗೆ ಎರಡು ಪ್ರತ್ಯೇಕ ಮಂಟಪಗಳು ರಚನೆಯಾಗಿವೆ. ಮೊದಲನೆಯ ಚಿತ್ರದಲ್ಲಿ ದೃಡಮನಸ್ಸಿನಿಂದ ಕುಳಿತ ಕೃಷ್ಣನ ಕೈಯನ್ನು ಸವರುತ್ತಾ ಇಲ್ಲಿ ಕೃಷ್ಣನು ಕಿರೀಟಾಭರಣಧಾರಿಯಾಗಿ ಕಾಲು ಮಡಚಿ ಕುಳಿತ್ತಿದ್ದಾನೆ. ಎದುರು ರಾಧೆಯು ನೀಲಿಕುಪ್ಪಸ ಹಳದಿ ಸೀರೆಯುಟ್ಟು ಕೃಷ್ಣನ ಹಾಗೆ ಕುಳಿತು ಮನಃವೋಲಿಸುವ ಪ್ರಯತ್ನ ನಡೆಸಿದ್ದಾಳೆ. ಇದಕ್ಕಾಗಿ ಬಿಳಿವರ್ಣದ ಮಂಟಪರಚಿಸಿ ಕಪ್ಪು ವರ್ಣರೇಖೆಯನ್ನು ಬರೆಯಲಾಗಿದೆ. ಎರಡನೆಯ ದೃಶ್ಯದಲ್ಲಿ ರಾಧೆಯು ಕಾಲುಮಡಚಿಕುಳಿತು ಚಾಮರ ಬೀಸುತ್ತಿದ್ದಾಳೆ. ಕೆಂಪು ಕುಪ್ಪಸ, ತೆಳುನೀಲಿ ಸೀರೆ



ತೊಟ್ಟಿದ್ದಾಳೆ. ಇಲ್ಲಿ ಕೃಷ್ಣನು ಕೈಯಲ್ಲಿ ಪುಷ್ಪ ಓಡಿದು ರಾಧೆಗೆ ತೋರಿಸುತ್ತಾ ಮೊಣಕಾಲುರಿ ಕುಳಿತಿರುವ ಭಂಗಿಯಲ್ಲಿದೆ. ಹಳದಿ ಪಂಚೆ, ಕಿರೀಟಾಭರಣಧಾರಿಯಾಗಿದ್ದಾನೆ. ಇದಕ್ಕಾಗಿ ಪ್ರತ್ಯೇಕ ಬಿಳಿವರ್ಣದ ಮಂಟಪ ಕಪ್ಪುವರ್ಣದ ರೇಖಗಳು ಮೂಡಿಬಂದಿವೆ. ಈ ಎರಡು ದೃಶ್ಯಗಳ ಹಿನ್ನಲೆಯಲ್ಲಿ ಕಪ್ಪು ಬಣ್ಣ ಉಪಯೋಗಿಸಲಾಗಿದೆ.

**೩೫. ರಾಧೆಯನ್ನು ಸಮಾದಾನ ಪಡಿಸುತ್ತಿರುವ ಕೃಷ್ಣ ಹಾಗೂ ಬೆಳದಿಂಗಳಲ್ಲಿ ಕೃಷ್ಣ–ರಾಧೆ ಸರಸ (ಚಿತ್ರ ಸಂ. ೪೫)**

ಇಲ್ಲಿ ಅಖಂಡವಾದ ಪಟ್ಟಿಕೆಯಲ್ಲಿ ಎರಡು ದೃಶ್ಯಗಳು ಮೂಡಿಬಂದಿವೆ. ಮೊದಲನೆಯದಾಗಿ ಕೃಷ್ಣನು ರಾಧೆಯನ್ನು ಸಮಾದಾನ ಪಡಿಸಲು ಪ್ರಯತ್ನಿಸುತ್ತಿದ್ದಾನೆ. ಎರಡನೆಯದಾಗಿ ಬೆಳದಿಂಗಳ ರಾತ್ರಿಯಲ್ಲಿ ರಾಧೆಕೃಷ್ಣರ ಮೀಲನ ಕ್ರಿಯೆಮೂಡಿಬಂದಿದೆ. ಎರಡು ಚಿತ್ರಗಳು ಒಟ್ಟಿಗೆಯಿದ್ದು ಕೃಷ್ಣನು ತೆಳು ನೀಲಿಮೈಬಣ್ಣಹೊಂದಿ ಹಳದಿ ಪಂಚೆಧರಿಸಿದ್ದಾನೆ. ಅಲ್ಲದೆ ಕಿರೀಟಾಭರಣಧಾರಿಯಾದ ಕೃಷ್ಣನು ರಾಧೆಯ ಕತ್ತನ್ನು ಓಡಿದು ಅವಳ ಮುಖವನ್ನು ನೋಡುತ್ತಿದ್ದಾನೆ. ರಾಧೆಯು ಇವನ ಮಾತಿಗೆ ಮರುಳಾಗದೆ ತನ್ನ ಎರಡೂ ಕೈಗಳಿಂದ ಕೃಷ್ಣನನ್ನು ದೂರಕ್ಕೆ ಸರಿಸುವ ಪ್ರಯತ್ನ ನಡದಿದೆ. ರಾಧೆಯು ಕೆಂಪು ಸೀರೆ, ಕೆಂಪು ಕುಪ್ಪಸ ತೊಟ್ಟು ಮೊಣಕಾಲೂರಿ ಬಲಕ್ಕೆ ಮುಖಮಾಡಿ ಕುಳಿತ್ತಿದ್ದಾಳೆ. ಕೃಷ್ಣನು ಹಿಂದೆ ಕಾಲು ಮಡಚಿ ಕುಳಿತ್ತಿರುವ ಹಾಗೆ ಮೂಡಿಬಂದಿದೆ. ಇಲ್ಲಿ ಎರಡೂ ಸನ್ನಿವೇಶಕ್ಕೆ ಎರಡು ಮಂಟಪಗಳು ರಚನೆಯಾಗಿವೆ. ಎರಡನೆಯ ದೃಶ್ಯದಲ್ಲಿ ಕೃಷ್ಣ ಮತ್ತು ರಾಧೆಯರು ನಗುಮುಖದಲ್ಲಿದ್ದು ಇಲ್ಲಿಯೂ ಸಹ ಹಳದಿ ಪಂಚೆ ಹಳದಿ ಕಿರೀಟಾಭರಣಧಾರಿಯಾಗಿದ್ದಾನೆ ರಾಧೆಯೂ ಸಹ ಹಿಂದಿನ ಚಿತ್ರದಲ್ಲಿರುವ ಹಾಗೆ ಕೆಂಪು ಸೀರೆಯೊಟ್ಟಿದ್ದು ಕುಪ್ಪಸ ಮಾತ್ರ ಹಳದಿಯಾಗಿದೆ. ಕೃಷ್ಣನ ತುಟಿಯನ್ನು ತನ್ನ ಕೈಬೆರಳಿನಿಂದ ಹಿಡಿದಿರುವುದು ಕಂಡುಬರುತ್ತದೆ. ಸುಂದರವಾದ ಈ ಬೆಳದಿಂಗಳ ರಾತ್ರಿಯಲ್ಲಿ ರಾಧೆಕೃಷ್ಣರ ಮಿಲನ ಕ್ರಿಯೆ ತುಂಬಾ ಅದ್ಭುತವಾಗಿ ಮೂಡಿಬಂದಿದೆ. ಸುತ್ತಲೂ ಕಪ್ಪು ಬಣ್ಣದ ಆಕಾಶ ರಚನೆಯಾಗಿದ್ದು ರಾಧೆಯು ಸಂತೋಷದಿಂದ ಕೃಷ್ಣನ ತೊಡೆಯಮೇಲೆ ಮಲಗಿಕೊಂಡಿದ್ದಾಳೆ.ಇದಕ್ಕಾಗಿ ಪ್ರತ್ಯೇಕವಾದ ಮುಂಟಪವು ರಚನೆಯಾಗಿದ್ದು ಇದು ಬಿಳಿವರ್ಣ ಹಾಗೂ ಕಪ್ಪು ರೇಖೆಗಳಿಂದ ಮೂಡಿದೆ.

**೩೬. ಕೃಷ್ಣನಿಗೆ ಪ್ರೀತಿಯನ್ನು ವ್ಯಕ್ತಪಡಿಸುತ್ತಿರುವ ರಾಧೆ ಮತ್ತು ಕೃಷ್ಣನಿಗೆ ಉಪಚರಿಸುತ್ತಿರುವ ರಾಧೆ (ಚಿತ್ರ ಸಂ. ೪೬)**

ಇಲ್ಲಿಯೂ ಸಹ ಎರಡು ದೃಶ್ಯಗಳು ಕಂಡುಬಂದು ಮೊದಲನೆಯದರಲ್ಲಿ ಕೃಷ್ಣನಿಗೆ ಪ್ರೀತಿಯ ಭಾಷೆಯನ್ನು ನೀಡುತ್ತಿದ್ದಾಳೆ. ಎರಡನೆಯದರಲ್ಲಿ ಕೃಷ್ಣನಿಗೆ ಊಟಮಾಡಿಸುವಚಿತ್ರಗಳು ಮೂಡಿಬಂದಿವೆ. ಪ್ರಥಮ ದೃಶ್ಯದಲ್ಲಿ ರಾಧೆಯು ಹಳದಿ ಮೈಬಣ್ಣ ಹಳದಿ ಚುಕ್ಕೆಯುಳ್ಳ ಸೀರೆಯೊಟ್ಟು ಬಲಗೈಯಿಂದ ಕೃಷ್ಣಗೆ ಭಾಷೆನೀಡಿದ್ದಾಳೆ. ಕೃಷ್ಣನು ಮೊಂಡೆಯೂರಿಕುಳಿತು ಅವಳ ಭಾಷೆಯನ್ನು ಸ್ವೀಕರಿಸುತ್ತಾ ಅವಳ ಮುಖವನ್ನು ನೇರ ದೃಷ್ಟಿಯಿಂದ ನೋಡುತ್ತಿದ್ದಾನೆ. ನೀಲಿ ಮೈಬಣ್ಣಹೊಂದಿದ ಕೃಷ್ಣ ಆಭರಣಧಾರಿಯಾಗಿ ಹಳದಿ ಪಂಚೆ. ಕೆಂಪು ವಸ್ತ್ರಧರಿಸಿದ್ದಾನೆ. ರಾಧೆಯು ಕೆಂಪು ಕುಪ್ಪಸ ತೊಟ್ಟ ಕಾಲು ಡೊಂಕಿಸಿ ನಿಂತರುವ ದೃಶ್ಯವಾಗಿದೆ. ಇದಕ್ಕಾಗಿ ಪ್ರತ್ಯೇಕವಾದ ಮಂಟಪವು ರಚನೆಯಾಗಿದೆ. ಎರಡನೆಯ ದೃಶ್ಯದಲ್ಲಿ ರಾಧೆಯು ಕೃಷ್ಣನಿಗೆ ತಾಂಬೂಲ ನೀಡುತ್ತಿರುವುದು ಇಲ್ಲಿ ಮಲಗಿ ತಾಂಬುಲ ಸ್ವೀಕರಿಸುತ್ತಿದ್ದಾನೆ. ನೀಲಿ ಮೈಬಣ್ಣ. ಹಳದಿ ಪಂಚೆ. ಹಳದಿ



ಕಿರೀಟಾಭರಣಧಾರಿಯಾಗಿದ್ದಾನೆ. ಅಲ್ಲದೆ ಇದಕ್ಕಾಗಿಯ ಪ್ರತ್ಯೇಕವಾದ ಮಂಟಪವು ರಚನೆಯಾಗಿದೆ. ಹಿನ್ನೆಲೆಯಾಗಿ ಇಲ್ಲಿಯೂ ಕಪ್ಪನ್ನು ಉಪಯೋಗಿಸಿ. ಮಂಟಪಕ್ಕೆ ಬಿಳಿವರ್ಣ ಹಾಗೂ ಕಪ್ಪು ರೇಖೆಯನ್ನು ಬರೆಯಲಾಗಿದೆ.

**೩೭. ರಾಧಾ ಕೃಷ್ಣರ ಪ್ರೇಮಲೀಲೆ (ಚಿತ್ರ ಸಂ. ೪೭)**

ಕೃಷ್ಣ ಮತ್ತು ರಾಧೆಯು ಪರಸ್ಪರ ಪ್ರೀತಿಯಿಂದ ಸರಸವಾಡುತ್ತಿದ್ದು, ಕೃಷ್ಣನು ನೀಲಿ ಮೈಬಣ್ಣದಿಂದ ಹಳದಿ ಪಂಚೆ ಕಿರೀಟಾ ಭರಣಧಾರಿಯಾಗಿದ್ದಾನೆ. ರಾಧೆಯು ತೆಳು ಗುಲಾಬಿ ಕುಪ್ಪಸ ಹಾಗೂ ಸೀರೆತೊಟ್ಟು ಬೇಸರದಿಂದ ನಿಂತಿರುವ ಭಂಗಿಯು ಕಂಡುಬರುತ್ತದೆ. ರಾಧೆಯ ಕುಪ್ಪಸ ಹಾಗೂ ಸೀರೆಗಳಲ್ಲಿ ಪ್ರಮುಖವಾಗಿ ಕಂಡುಬರುವ ಚುಕ್ಕೆಗಳು ಪ್ರಮುಖ ಪಾತ್ರವಹಿಸಿವೆ.ಕೃಷ್ಣನ ಪಂಚೆಯಲ್ಲಿ ರೇಖೆಗಳು ಚುಕ್ಕೆಗಳು ಮೂಡಿವೆ. ಈ ಚಿತ್ರದಲ್ಲಿ ಬಿಳಿವರ್ಣದ ಮಂಟಪವು ರಚನೆಯಾಗಿದ್ದು ಇಲ್ಲಿ ಕಪ್ಪು ವರ್ಣದ ರೇಖೆಗಳು ಮೂಡಿಬಂದಿವೆ. ಈ ಚಿತ್ರದಲ್ಲಿ ಹಿನ್ನಲೆ ಲೇಪನವಾಗಿ ಕಪ್ಪು ವರ್ಣವನ್ನು ಉಪಯೋಗಿಸಿದ್ದಾರೆ.

**೩೮. ರಾಗ ಅನುರಾಗ ಲೀಲೆ: ರಾಧಾ-ಕೃಷ್ಣ (ಚಿತ್ರ ಸಂ. ೪೮)**

ರಾಗ ಅನುರಾಗಲೀಲೆ. ಈ ಚಿತ್ರದಲ್ಲಿ ರಾಧಾ ಕೃಷ್ಣರು ಪ್ರಣಯಗೀತೆಗಳನ್ನು ಹಾಡುತ್ತಾ ಪರಸ್ಪರ ಸರಸದಲ್ಲಿ ತೊಡಗಿದ್ದು. ರಾಧೆಯ ಕುಳಿತುಕೊಂಡು ನಾಡಿಕೆಯಿಂದ ಹಿಂದುಗಡೆ ಮುಖತಿರುವಿ ಕೊಂಡಿದ್ದಾಳೆ.ಮತ್ತು ತೆಳು ಗುಲಾಬಿ ವರ್ಣದ ಸೀರೆ, ಕುಪ್ಪಸವನ್ನು ಧರಿಸಿದ್ದು. ದೊಡ್ಡಗಾತ್ರದ ಅಲಂಕಾರಿಕ ಶ್ವೇತವರ್ಣದ ಮುಗೂತಿಯನ್ನು ಹಾಕಿದ್ದಾಳೆ. ಹಾಗೆಯೇ ಕೃಷ್ಣನನ್ನು ನಿಂತ ಭಂಗಿಯಲ್ಲಿ ಚಿತ್ರಸಿದ್ದು. ರಾಧೆಯ ಜೊತೆ ಸರಸವಾಡುತ್ತಾ ರಾಧೆಗೆ ಚೇಷ್ಟೆ ಮಾಡುತ್ತಿರುವ ಹಾಗೆ. ನಾಚಿಕೊಂಡರಾಧೆಯನ್ನು ಬಲಗೈಯನ್ನು ಚಾಚಿ ಹೊರಳಿಸುತ್ತಿರುವ ಹಾಗೆ ಚಿತ್ರಿಸಿಲಾಗಿದೆ. ಹಾಗೂ ಕೃಷ್ಣನ ಮೈಬಣ್ಣವು ನೀಲಿ ವರ್ಣದಿಂದ ಕೂಡಿದ್ದು. ಹಳದಿ ಪಂಚೆ ಮತ್ತು ಹಳದಿ ವರ್ಣದ ಅಲಂಕಾರಿಕ ಕೀರಿಟವನ್ನು ಧರಿಸಿದ್ದಾನೆ. ಈ ರೀತಿಯಾಗಿ ರಾಧಾಕೃಷ್ಣರ ಪರಸ್ಪರ ಪ್ರಣಯದಲ್ಲಿ ಸರಸಸಲ್ಲಾಪವಲ್ಲಿ ತೊಡಗಿದ್ದು ಈ ಚಿತ್ರದಲ್ಲಿ ಕಾಣಬಹುದು.

**೩೯. ಕೋಪಿಸಿಕೊಂಡ ಕೃಷ್ಣನಿಗೆ ಪ್ರೀತಿಯಿಂದ ಸಮಾಧಾನಿಸುತ್ತಿರುವ ರಾಧೆ (ಚಿತ್ರ ಸಂ. ೪೯)**

ಇಲ್ಲಿ ಕೃಷ್ಣನಿಗೆ ಸಮಾಧಾನಪಡಿಸುತ್ತಿರುವ ರಾಧೆಯು ಕೃಷ್ಣನಿಗೆ ತಾಂಬೂಲವನ್ನು ಕೊಡುತ್ತಿದ್ದಾಳೆ. ಕೃಷ್ಣನು ಅದನ್ನು ಸ್ವೀಕರಿಸದೇ ಬಲಕ್ಕೆ ಮುಖತಿರುವಿಕೊಂಡಿದ್ದಾನೆ. ಇಲ್ಲಿ ಕೃಷ್ಣನ ಮೈಬಣ್ಣ ನೀಲಿಯಾಗಿದ್ದು ಕಿರೀಟಾಭರಣಧಾರಿಯಾಗಿದ್ದಾನೆ. ಕೆಂಪು ವಸ್ತ್ರ ಹಳದಿ ಪಂಚೆ ತೊಟ್ಟ ಕೃಷ್ಣ ನೆಲಕ್ಕೆ ಮೊಂಡೆಯೂರಿ ಕುಳಿತಿದ್ದಾನೆ. ರಾಧೆಯು ಕೃಷ್ಣನ ಮುಖವನ್ನು ನೋಡುತ್ತಿರುವಂತೆ ರಾಧೆಯು ಹಳದಿ ಮೈಬಣ್ಣದೊಂದಿಗೆ ತೆಳು ಗುಲಾಬಿ ವರ್ಣದ ಸೀರೆಯನ್ನು ತೊಟ್ಟಿದ್ದಾಳೆ ಇಬ್ಬರ ಮಧ್ಯದಲ್ಲಿ ಮರದ ಟೊಂಗೆಗಳನ್ನು ರಚಿಸಿ ಟೊಂಗೆಗಳನ್ನು ಖಾಲಿಜಾಗಕ್ಕೆ ಭಾಗಿಸಿದ್ದಾರೆ. ಟೊಂಗೆ ಮತ್ತು ಎಲೆಗಳನ್ನು ಹಸಿರು ವರ್ಣದಿಂದ ರಚಿಸಿದ್ದಾರೆ. ತುದಿಭಾಗದಲ್ಲಿ ಕೆಂಪು ಹೂವಿನ ಕಲ್ಪಗೆ ಬರುಹಾಗೆ ಕಲಾವಿದ ಹೂವುಗಳನ್ನು ಎಲೆಯ ಹಾಗೆ ಒಂದೇ ದಳದಂತೆ ರಚಿಸಿದ್ದಾರೆ.



**೪೦. ಕೃಷ್ಣನನು ಕೊಳಲು ನುಡಿಸಿ ರಾಧೆಯನ್ನು ಸಂತೋಷಪಡಿಸುತ್ತಿರುವ ದೃಶ್ಯ (ಚಿತ್ರ ಸಂ. ೫೦)**

ಬೃಹತ್ತಾದ ಮಂಟಪದಲ್ಲಿ ಈ ಚಿತ್ರವಿದ್ದು ಇಲ್ಲಿ ಕೃಷ್ಣನು ಕೋಳಲನ್ನು ನುಡಿಸುತ್ತಿರುವುದು ರಾಧೆಯು ಈ ಸಂಗೀತ ರಾಗಕ್ಕೆ ಮರುಳಾಗಿ ನೃತ್ಯಮಾಡುತ್ತಿರುವ ಹಾಗೆ ಮೂಡಿಬಂದಿದೆ. ರಾಧೆಯು ಬಿಳಿಚುಕ್ಕಿಯ ಸೀರೆತೊಟ್ಟು ಗುಲಾಬಿವರ್ಣ್ಣದ ಕುಪ್ಪಸ ತೊಟ್ಟಿದ್ದಾಳೆ. ಒಂದು ಕೈ ಮೇಲೆ ಮತ್ತೊಂದು ಕೈ ಸ್ವಲ್ಪಬಾಗಿಸಿ ಕಿವಿಯ ಹತ್ತಿರ ವಿರುವುದು ಕಂಡುಬರುತ್ತದೆ. ಹಳದಿ ವರ್ಣಹೊಂದಿದ ರಾಧೆ ಬಲಗಾಲನ್ನು ಮಡಿಚಿ ಕೃಷ್ಣನನ್ನು ನೋಡುತ್ತಿದ್ದಾಳೆ. ಕೃಷ್ಣನು ಹಳದಿ, ಕಿರೀಟ, ಹಳದಿ ಪಂಚೆಯುಟ್ಟು ಕೋಳಲನ್ನು ನುಡಿಸುವುದರೊಂದಿಗೆ ಎಡಗಾಲನ್ನು ಡೊಂಕಿಸಿ ಮುಂದೆ ಇಡಲಾಗಿದೆ. ಇಬ್ಬರ ಕೋರಳಲ್ಲಿ ಮುತ್ತಿನ ಹಾರವಿದ್ದು ಸಂಗೀತದಲ್ಲಿ ತಲ್ಲಿನರಾದ ಹಾಗೆ ಭಾಸವಾಗುತ್ತದೆ. ಹಿನ್ನೆಲೆಯ ಲೇಪನವಾಗಿ ಕಪ್ಪನ್ನು ಉಪಯೋಗಿಸಿ ಬಿಳಿಮಂಟಪದಲ್ಲಿ ಕಪ್ಪು ರೇಖಾವಿನ್ಯಾಸಗಳು ಮೂಡಿಬಂದಿವೆ. ಇಲ್ಲಿ ಮೇಲಕ್ಕೆ ಹೋದ ರಾಧೆಯು ಬಲಗೈ ಅಪೂರ್ಣವಾಗಿ ಕಂಡುಬಂದಿದೆ.

**೪೧. ಗೋಪಿಕೆಯರ ಕೋಲಾಟದ ದೃಶ್ಯ (ಚಿತ್ರ ಸಂ. ೫೧)**

ಇಲ್ಲಿ ಗೋಪಿಕಾ ಸ್ತ್ರೀಯರು ಕೋಲಾಟವಾಡುತ್ತಿರುವುದು ಕಂಡುಬಂದಿದೆ ಒಟ್ಟು ನಾಲ್ವರು ಗೋಪಿಕಾ ಸ್ತ್ರೀಯರು ಇದ್ದು ಆಭರಣಧಾರಿಯಾಗಿದ್ದಾರೆ. ಇವರಲ್ಲಿ ಇಬ್ಬರು ತೆಳುಗುಲಾಬಿ ಸೀರೆ ತೊಟ್ಟರೆ. ಒಬ್ಬಳು ಹಸಿರು ಸೀರೆ, ಮತ್ತೊಬ್ಬಳು ಕೆಂಪು ಸೀರೆ ತೊಟ್ಟಿದ್ದಾಳೆ. ಸಾಮಾನ್ಯವಾಗಿ ಇಬ್ಬರು ಹಸಿರು ಕುಪ್ಪಸ. ಕೆಂಪು ನೇರಳೆ ಕುಪ್ಪಸ ಧರಿಸಿದ್ದು ಕಂಡುಬಂದಿದೆ. ಮಧ್ಯದ ಸ್ತ್ರೀಯರು ಕೈಯಲ್ಲಿ ಕೋಲುಹಿಡಿದು ಇಬ್ಬರು ಮಧ್ಯದಲ್ಲಿ ಮುಖಮಾಡಿ ನಿಂತರೆ ಅಕ್ಕ ಪಕ್ಕದಲ್ಲಿ ಸ್ತ್ರೀಯರು ಎಡ ಮತ್ತು ಬಲ ಮುಖಮಾಡಿನಿಂತಿದ್ದಾರೆ. ಎಲ್ಲರ ಭಾವ ಭಂಗಿಯೂ ಬೇರೆಬೇರೆ ರೀತಿಯಾಗಿದೆ. ತೆಳುಹಳದಿ ಹಿನ್ನೆಲೆಯಲ್ಲಿ ಈ ಚಿತ್ರ ರೂಪಿತಗೊಂಡಿದೆ. ಎಲ್ಲರ ಸೀರೆ ಹಾಗೂ ಕುಪ್ಪಸದಲ್ಲಿ ಚುಕ್ಕೆಗಳು ಒಡಮೂಡಿವೆ. ಈ ಗೋಪಿಕಾ ಸ್ತ್ರೀಯರ ಮೈಬಣ್ಣವು ಹಳದಿಯಾಗಿದೆ. ಕೈಯಲ್ಲಿಯ ಕೋಲುಗಳು ಕೆಂಪು ವರ್ಣದಲ್ಲಿ ಮೂಡಿರುವುದು ಕಂಡುಬಂದಿದೆ. ಅಲ್ಲಲ್ಲಿ ಕಾಗದವು ಕಿತ್ತಿರುವುದು ಕಂಡುಬಂದಿದೆ.

**೪೨. ಕೃಷ್ಣನನ್ನು ಹುಡುಕುತ್ತಿರುವ ಗೋಪಿಕೆಯರು (ಚಿತ್ರ ಸಂ. ೫೨)**

ಕೃಷ್ಣನನ್ನು ಹುಡುಕುತ್ತಿರುವ ಗೋಪಿಕಾಸ್ತ್ರೀಯರು. ಒಂದೇ ಭಂಗಿಯಲ್ಲಿರುವುದು ಕಂಡುಬರುತ್ತದೆ. ಇಲ್ಲಿ ಒಟ್ಟು ನಾಲ್ಕು ಸ್ತ್ರೀಯರನ್ನು ಚಿತ್ರಿಸಿದ್ದು ಮೊದಲನೆಯವಳು ನೀಲಿ ಸೀರೆ, ಎರಡನೆಯವಳು, ಗುಲಾಬಿಸೀರೆ ಮೂರನೆಯವಳು ಕೆಂಪುಸೀರೆ ಕೊನೆಯವಳು ಸಹ ಕೆಂಪು ಸೀರೆ ತೊಟ್ಟಿರುವುದು ಕಂಡುಬರುತ್ತದೆ. ನೀಲಿಸೀರೆಗೆ ಗುಲಾಬಿ ಕುಪ್ಪಸ ಹಾಗೆ ಗುಲಾಬಿಗೆ, ನೀಲಿ ಕೆಂಪ್ಪು ತೆಳುಗುಲಾಬಿಕುಪ್ಪಸ ತೊಟ್ಟಿದ್ದಾರೆ. ಈ ನಾಲ್ಕು ಸ್ತ್ರೀಯರು ಕೃಷ್ಣನನ್ನು ಹುಡುಕಲು ಹೋರಟಿದ್ದಾರೆ. ಉದ್ದವಾದ ಪಟ್ಟಿಕೆಯಲ್ಲಿ ಒಂದು ಚಿತ್ರದ ಕೆಳಗೆ ಮತ್ತೊಂದು ಚಿತ್ರ ಅನ್ನುವ ಹಾಗೆ ನಾಲ್ಕು ಚಿತ್ರಗಳು ಮೂಡಿವೆ. ನೀಲಿ ಹಿನ್ನೆಲೆಯ ಮೇಲೆ ರಚನೆಯಾದ ಈ ಚಿತ್ರಗಳು ಅಲ್ಲಲ್ಲಿ ವರ್ಣ ಕಿತ್ತಿರುವುದು ಕಂಡುಬರುತ್ತದೆ.



### ೪೩. ರಾಧಾಕೃಷ್ಣರ ನೃತ್ಯ (ಚಿತ್ರ ಸಂ. ೫೩)

ಇಲ್ಲಿ ರಾಧಾಕೃಷ್ಣ ಇಬ್ಬರು ನೃತ್ಯಮಾಡುವ ಚಿತ್ರ ಮೂಡಿಬಂದಿರುತ್ತದೆ. ಅಖಂಡವಾದ ಪಟ್ಟಿಕೆಯಲ್ಲಿ ಈ ಚಿತ್ರ ರೂಪಗೊಂಡಿದ್ದು ಇಲ್ಲಿ ರಾಧೆಯು ಕೆಂಪು ಸೀರೆತೊಟ್ಟು ರಾಧೆಯು ಕೃಷ್ಣನ ಕೈಯನ್ನು ಹಿಡಿದಿದ್ದಾಳೆ. ಕೃಷ್ಣನು ರಾಧೆಯ ಭುಜದ ಮೇಲೆ ಕೈಯಿಟ್ಟು ರಾಧೆಯು ಕೃಷ್ಣನ ಭುಜದ ಮೇಲೆ ಕೈಯಿಟ್ಟಿದು ಕಂಡುಬಂದಿದೆ. ಕೃಷ್ಣನು ನೀಲಿಮೈಬಣ್ಣ ಹೊಂದಿ ಕಿರೀಟಧಾರಿಯಾಗಿದ್ದಾನೆ. ಹಳದಿ ಪಂಚೆಯೊಂದಿಗೆ ಒಂದುಕಾಲು ಮುಂದೆ ಒಂದುಕಾಲು ಹಿಂದೆ ಮಾಡಿದ್ದಾನೆ. ರಾಧೆಯ ಒಂದು ಕಾಲು ಮುಂದೆ ಒಂದುಕಾಲು ಹಿಂದೆ ಮೂಡಿರುವುದು ಕಂಡುಬರುತ್ತದೆ. ರಾಧೆಯ ಮೈಬಣ್ಣವು. ತೆಳು ಹಳದಿ ವರ್ಣದಲ್ಲಿ ಮೂಡಿಬಂದಿದೆ. ಇಲ್ಲಿ ಬೃಹತ್ತಾದ ಮಂಟಪ ರಚನೆಯಾಗಿದ್ದು ಮಧ್ಯದಲ್ಲಿ ರಾಧೆ ಕೃಷ್ಣರ ನೃತ್ಯ ಚಿತ್ರವನ್ನು ಜಿಡಿಸಲಾಗಿದೆ. ಮಂಟಪವು ಎರಡು ಕಂಭವನ್ನು ಹೊಂದಿದ್ದು ಇದು ಬಿಳಿವರ್ಣದಲ್ಲಿ ರಚನೆಯಾಗಿದ್ದು ಮಾತ್ರವಲ್ಲದೆ. ಕಪ್ಪು, ಮತ್ತು ಕಂದುಮಿಶ್ರಿತ ಕೆಂಪುವರ್ಣದಿಂದ ಚೌಕಾಕಾರ, ಚುಕ್ಕೆಗಳು, ರೇಖೆಗಳು, ಎಲೆಯಾಕಾರ, ಹೂಗಳು ರಚನೆಯಾಗಿವೆ. ಕೆಳಗಿನ ಕಂಭಗಳಲ್ಲಿ ಸಣ್ಣ ಸಣ್ಣ ಎಲೆಗಳು ಮೂಡಿಬಂದಿವೆ. ಮೇಲ್ಭಾಗದಲ್ಲಿ ಹಸಿರು ವರ್ಣದ ಎಲೆಗಳು ಮೂಡುವುದರೊಂದಿಗೆ ದಟ್ಟ ನೀಲಿವರ್ಣದ ಹಿನ್ನೆಲೆಯ ಮೇಲೆ ಈ ಚಿತ್ರ ನಿರ್ಮಾಣಗೊಂಡಿದೆ.

### ೪೪. ಪೂಜೆಯ ಸಿದ್ದತೆಯಲ್ಲಿ ಗೋಪಿಕೆಯರು (ಚಿತ್ರ ಸಂ. ೫೪)

ಈ ಚಿತ್ರದಲ್ಲಿ ನಾಲ್ವರು ಗೋಪಿಕೆಯರು ಸಾಲಾಗಿನಿಂತು ತಮ್ಮ ಎರಡು ಕೈಗಳನ್ನು ಮುಂದೆಕ್ಕೆ ಚಾಚಿ ಆರತಿಯನ್ನು ಹಿಡಿದುಕೊಂಡು ಪೂಜೆಗೆ ಹೋರಟಿರುವ ದೃಶ್ಯ ಕಂಡುಬರುತ್ತದೆ. ನಾಲ್ವರು ಗೋಪಿಕೆಯರನ್ನು ಓರೆಯಾಗಿ ತೋರಿಸಿದ್ದು ಇವರ ಉಡುಗೆ ತೋಡುಗೆ ಮತ್ತು ಆಭರಣಗಳು ಒಂದೇ ಮಾದರಿಯಲ್ಲಿದ್ದು ಕಂಡುಬರುತ್ತದೆಯಾದರೂ ಸೀರೆ ಮತ್ತು ಕುಪ್ಪಸಗಳನ್ನು ಹಳದಿ. ಕೆಂಪು. ಬಿಳಿ.ಗುಲಾಬಿ ವರ್ಣಗಳಿಂದ ಚಿತ್ರಿಸಲಾಗಿದೆ. ಮತ್ತು ನಾಲ್ವರು ಒಂದೇ ಮಾದರಿಯ ದೊಡ್ಡದಾದ ಶ್ವೇತ ವರ್ಣದ ಮೂಗುತಿಯನ್ನು ದರಿಸಿರುವದು ಕಂಡುಬರುತ್ತದೆ. ಈ ಚಿತ್ರದಲ್ಲಿರುವ ಗೋಪಿಕೆಯರು ಬಹುಶಃ ಕೃಷ್ಣನನ್ನು ಪೂಜಿಸಲು ಹೊರಟಿರಬಹುದೆಂದು ಉಹಿಸಲಾಗಿದೆ.

### ೪೫ ಕೃಷ್ಣನ ಕೊಳಲು ವಾದನವನ್ನು ಕೇಳಿ ಸಮ್ಮೋಹಗೊಂಡ ಗೋಪಿಕೆಯರು (ಚಿತ್ರ ಸಂ. ೫೫)

ಈ ಚಿತ್ರದಲ್ಲಿ ಗೋಪಿಕೆಯರು ತಲೆಮೇಳೆ ಬುಟ್ಟಿಯನ್ನು ಹೋತ್ತುಕೊಂಡು ಹೋಗುತ್ತಿದ್ದು ಹಿಂಬದಿಯಲ್ಲಿ ಕೃಷ್ಣನ ಕೊಳಲು ವಾದನವನ್ನು ಕೇಳಿ ಗೋಪಿಕೆಯರು ಆಕರ್ಷಿತರಾಗಿ ಕೃಷ್ಣನೆಡೆಗೆ ಹೋರಟಿದ್ದಾರೆ. ಸಾಮಾನ್ಯವಾಗಿ ಕೆಂಪು ಚುಕ್ಕೆಗಳುಳ್ಳ ಸೀರೆ. ಹಾಗೂ ಕುಪ್ಪಸ ತೊಟ್ಟಿದ್ದಾರೆ. ಮತ್ತು ಒಬ್ಬಳು ಮಾತ್ರ ಹಸಿರು ಸೀರೆ ತೊಟ್ಟಿರುವುದು ಕಂಡುಬಂದಿದೆ. ತಲೆಯ ಮೇಲೆಯ ಬುಟ್ಟಿಯು ನೇರಳೆ ಬಣ್ಣದಿಂದ ರಚಿಸಲಾಗಿದೆ. ಹಲವಾರು ಆಭರಣಧಾರಿಯಾದ ಈ ಸುಂದರಿಯರು ಕೋರಳಲ್ಲಿ ಮುತ್ತಿನಹಾರ ಹಾಕಿಕೊಂಡಿದ್ದಾರೆ. ಹಿನ್ನೆಲೆಯ ಖಾಲಿ ಜಾಗವನ್ನು ಎಲೆಹೂಗಳಿಂದ ರಚಿಸಲಾಗಿದೆ. ಬಲಭಾಗದಲ್ಲಿ ಕೃಷ್ಣನು ಇದ್ದು ಹಾಲು ಮೊಸರು ಕೇಳುವ ಹಾಗೆ ಮೇಲಕ್ಕೆ ಕೈಮಾಡಿ ಕೇಳುವ ಹಾಗಿದೆ. ನೀಲಿ ಮೈಬಣ್ಣ ಹೊಂದಿದ ಈ ಕೃಷ್ಣ ಹಳದಿ



ಪಂಚೆಯನ್ನು ತೊಟ್ಟಿದ್ದಾನೆ. ಈ ಎಲ್ಲಾ ಚಿತ್ರಗಳ ಹಿನ್ನೆಲೆಯಲ್ಲಿ ಬಿಳಿವರ್ಣ ಲೇಪನವನ್ನು ಕಾಣಬಹುದಾಗಿದೆ. ಸೀರೆಗಳು ಹಳದಿ, ಹಾಗೂ ತೆಳುಗುಲಾಬಿಯಿಂದ ಕೂಡಿವೆ ಈ ಸೀರೆ ಹಾಗೂ ಕುಪ್ಪಸದಲ್ಲಿ ರೇಖೆ, ಹಾಗೂ ಚುಕ್ಕೆಗಳು ಪ್ರಧಾನವಾಗಿ ಮೂಡಿಬಂದಿವೆ. ಹಲವಾರು ಆಭರಣಧಾರಿಯಾದ ಈ ಸುಂದರಿಯರು ಕೊರಳಲ್ಲಿ ಬಿಳಿಮುತ್ತಿನ ಹಾರವನ್ನು ಧರಿಸಿದ್ದಾರೆ. ಈ ಎಲ್ಲಾ ಚಿತ್ರಗಳ ಹಿನ್ನೆಲೆಯಲ್ಲಿ ತೆಳುಗುಲಾಬಿ ಮಿಶ್ರಿತ ಬಿಳಿ ಬಣ್ಣಬಳಸಲಾಗಿದೆ.

**೪೬. ಕೃಷ್ಣನ ಬರುವಿಕೆಯನ್ನು ಆತುರದಿಂದ ಕಾಯುತ್ತಿರುವ ಗೋಪಿಕಾ ಸ್ತ್ರೀಯರು (ಚಿತ್ರ ಸಂ ೫೬)**

ಕೃಷ್ಣನನ್ನು ಹುಡುಕುವ ಕಾತುರದಲ್ಲಿರುವ ಗೋಪಿಕಾ ಸ್ತ್ರೀಯರು ಸಾಲಾಗಿ ಮೂಡಿ ಬಂದಿದ್ದಾರೆ. ಈ ಚಿತ್ರದಲ್ಲಿ ಐದು ಜನ ಗೋಪಿಕಾ ಸ್ತ್ರೀಯರಿದ್ದು ಹಿಂಬಾಗದ ಕೃಷ್ಣ ಎಲ್ಲಿರಬಹುದೆಂದು ಯೋಚನೆಮಾಡುತ್ತಿರುವಾಗ ತುಟಿಯ ಮೇಲೆ ಬೆರಳಿಟ್ಟು ಚಿಂತಿಸುತ್ತಿದ್ದರೆ ಮುಂಭಾಗದ ಸ್ತ್ರೀಯರು ಕೃಷ್ಣನನ್ನು ಹುಡುಕುವ ಕಾತುರದಲ್ಲಿದ್ದಾರೆ. ಚಾಮರ, ಬೀಸಣಕಿಯನ್ನು ಹಿಡಿದು ಹೊರಟಿರುವ ಈ ಎಲ್ಲಾ ಸ್ತ್ರೀಯರು ಅಲಂಕಾರಾತ್ಮಕವಾಗಿ ಮೂಡಿಬಂದಿದ್ದಾರೆ. ಈ ಗೋಪಿಕಾ ಸ್ತ್ರೀಯರ ಸೀರೆಗಳು ಹಳದಿ ಹಾಗೂ ತೆಳು ಗುಲಾಬಿ ವರ್ಣದಿಂದ ಕೂಡಿವೆ. ಈ ಸೀರೆ ಹಾಗೂ ಕುಪ್ಪಸಗಳಲ್ಲಿ ರೇಖೆ ಹಾಗೂ ಕುಪ್ಪಸಗಳು ಪ್ರಧಾನವಾಗಿ ಮೂಡಿಬಂದಿವೆ. ಹಲವಾರು ಆಭರಣದಾರಿಯಾದ ಈ ಸುಂದರಿರು ಕೊರಳಲ್ಲಿ ಮುತ್ತಿನಹಾರವನ್ನು ಧರಿಸಿದ್ದಾರೆ. ಈ ಎಲ್ಲಾ ಚಿತ್ರಗಳ ಹಿನ್ನೆಲೆಯಲ್ಲಿ ತೆಳುಮಿಶ್ರಿತ ಬಿಳಿವರ್ಣವನ್ನು ಬಳಸಲಾಗಿದೆ.

**೪೭. ಗೋಪಿಕೆಯರನ್ನು ಅಡ್ಡಗಟ್ಟಿ ನಿಂತಿರುವ ಕೃಷ್ಣ (ಚಿತ್ರ ಸಂ. ೫೭)**

ಮಥುರಾ ವ್ಯಾಪಾರಕ್ಕೆ ಹೋರಟಿರುವ ಸ್ತ್ರೀಯರನ್ನು ಕೃಷ್ಣ ನಡುದಾರಿಯಲ್ಲಿಯೇ ಅಡ್ಡಗಟ್ಟಿ ನಿಂತಿರುವುದು ಗೋಪಿಕಾ ಸ್ತ್ರೀಯರು ಹಳದಿ ಮೈಬಣ್ಣ ಹೊಂದಿ ಆಭರಣಧಾರಿಯಾಗಿದ್ದಾರೆ. ಕೆಂಪು, ಹಾಗೂ ನೀಲಿ ಕುಪ್ಪಸ ಹಳದಿ ತೊಟ್ಟು ಮತ್ತು ಕೆಂಪು ಹಾಗೂ ಗುಲಾಬಿ ಬಣ್ಣದ ಸೀರೆಯೂಟ್ಟು ತೆಲೆಯ ಮೇಲೆ ಬುಟ್ಟಿಯನ್ನು ಹೋತ್ತುಕೊಂಡು ನಡೆದಿರುವ ಸ್ತ್ರೀಯರು ಕೃಷ್ಣನನ್ನು ನೋಡುತ್ತಿರುವಹಾಗೆ ಮೂಡಿಬಂದಿವೆ. ಇಲ್ಲಿ ಸ್ತ್ರೀಯರಿಗೆ ಅಡ್ಡನಿಂತ ಕೃಷ್ಣ ನೀಲಿ ಮೈಬಣ್ಣ ಕೆಂಪು ವಸ್ತ್ರ ಹಳದಿ ಪಂಚೆಯ ತೊಟ್ಟಿದ್ದಾನೆ. ಕೈಯಲ್ಲಿ ಪುಷ್ಪವನ್ನು ಹಿಡಿದು ಎದುರುಗೆ ಹೋಗುತ್ತಿರುವ ಗೋಪಿಕಾ ಸ್ತ್ರೀಯರಿಗೆ ಕೊಡುತ್ತಿರುವ ಹಾಗೆ ಚಿತ್ರ ಮೂಡಿಬಂದಿದೆ. ಕೃಷ್ಣನ ಎಡಗೈ ಕೆಳಗೆ ಕಪ್ಪು ಬಣ್ಣದ ಕೋಲು ರಚಿತಗೊಂಡಿದ್ದು ಕೃಷ್ಣನ ಮಾತುಗಳನ್ನು ಲೆಕ್ಕಿಸಿದೆ ಗೋಪಿಕಾ ಸ್ತ್ರೀಯರು ಮುಂದೆಹೊರಡುವ ಹಾಗೆ ಕಂಡುಬರುತ್ತದೆ. ಅಲ್ಲಲ್ಲಿ ಖಾಲಿ ಜಾಗವನ್ನು ಹೂ ಬಳ್ಳಿಯಿಂದ ತುಂಬಿಸಲಾಗಿದೆ. ತೆಳು ಹಳದಿ ಹಿನ್ನೆಲೆಯ ಮೇಲೆ ರಚನೆಯಾದ ಈ ಚಿತ್ರದ ಕಾಗದವು ಅವನತಿಯ ಹಂತದಲ್ಲಿದೆ.

**೪೮. ಗೋಪಿಕೆಯರನ್ನು ಅಡ್ಡಗಟ್ಟಿ ನಿಂತಿರುವ ಕೃಷ್ಣ ಹಾಗೂ ಬಲರಾಮ (ಚಿತ್ರ ಸಂ. ೫೮)**

ಅಖಂಡವಾದ ಪಟ್ಟಿಕೆಯಲ್ಲಿ ವಿಶೇಷವಾಗಿ ಕೆಂಪು ಹಿನ್ನೆಲೆಯಲ್ಲಿ ಮೂಡಿಬಂದ ಚಿತ್ರ ಇದಾಗಿದೆ. ಇಲ್ಲಿ ಗೋಪಿಕಾ ಸ್ತ್ರೀಯರು ಹಾಲುಮೊಸರು ಬೆಣ್ಣೆಯನ್ನು ಬುಟ್ಟಿಯಲ್ಲಿ ಹೊತ್ತು ಹೋಗುತ್ತಿರುವುದನ್ನು ತಡೆದು ನಿಲ್ಲಿಸಿದ ಕೃಷ್ಣ ಹಾಗೂ ಬಲರಾಮ ಇಬ್ಬರು ಕೈಯಲ್ಲಿ ಪುಷ್ಪಗಳನ್ನು ಹಿಡಿದು ಗೋಪಿಕಾಸ್ತ್ರೀಯರಿಗೆ



ಕೋಡುತ್ತಿರುವ ಹಾಗೆ ಈ ಚಿತ್ರ ಮೂಡಿಬಂದಿದೆ. ಕೃಷ್ಣ ಹಾಗೂ ಬಲರಾಮನ ಮಾತುಗಳನ್ನು ಲೆಕ್ಕಿಸದೆ ಹೋರಡುವ ಹಾಗೆ ಸ್ತ್ರೀಯರು ತಮ್ಮ ಹೆಜ್ಜೆಯನ್ನು ಮುಂದೆ ಇಡುತ್ತಿದ್ದಾರೆ. ಇಲ್ಲಿ ಸ್ತ್ರೀಯರು ತೆಳುಗುಲಾಬಿವರ್ಣದ ಸೀರೆ ತೊಟ್ಟು ಅದೇಬಣ್ಣದ ಕುಪ್ಪಸ ಕೂಡಾ ತೊಟ್ಟಿದ್ದಾರೆ. ತಲೆಯ ಮೇಲಿನ ಬುಟ್ಟಿಯು ಸಹ ಹಳದಿ ವರ್ಣದಲ್ಲಿ ಮೂಡಿಬಂದಿದೆ. ಇಲ್ಲಿ ಕೃಷ್ಣಬಲರಾಮ ಕಿರೀಟಾಭರಣಧಾರಿಯಾಗಿ ಕೃಷ್ಣನ ಪಂಚೆ, ಹಳದಿ ವರ್ಣವಾದರೆ ಬಲರಾಮನ ಪಂಚೆ ನೀಲಿವರ್ಣವಾಗಿದೆ. ತೆಳುಗುಲಾಬಿ ಮೈಬಣ್ಣ ಹೊಂದಿದ ಬಲರಾಮ ಎಡಗೈ ಕೆಳಗೆ ಕೋಲನ್ನು ಇಟ್ಟಿದ್ದಾನೆ. ಅದೇ ರೀತಿ ಕೃಷ್ಣನು ಸಹ ಕೋಲನ್ನು ನೆಲಕ್ಕೆ ಆಧಾರವಾಗಿ ಹಿಡಿದು ನಿಂತಿದ್ದಾನೆ. ಈ ಚಿತ್ರಗಳು ಉದ್ದವಾದ ಪಟ್ಟಿಕೆಯಲ್ಲಿ ಮೂಡಿಬಂದಿವೆ.

**೪೯. ಹಾಲು, ಮೊಸರು ಬೆಣ್ಣೆ ಮಾರಲು ಹೋರಟಿರುವ ಗೋಪಿಕಾಸ್ತ್ರೀಯರು (ಚಿತ್ರ ಸಂ. ೫೯)**

ಇಲ್ಲಿ ಹಾಲು ಮೊಸರು ಬೆಣ್ಣೆ ತುಂಬಿದ ಬುಟ್ಟಿಯನ್ನು ಹೊತ್ತು ಮಥುರಾ ಪ್ರದೇಶದಲ್ಲಿ ಮಾರಾಟಮಾಡುವ ದೃಶ್ಯ ಕಂಡುಬಂದಿದೆ. ಇಲ್ಲಿ ನಾಲ್ಕು ಜನ ಸ್ತ್ರೀಯರ ಚಿತ್ರ ರಚನೆಯಾಗಿದ್ದು ಕಂಡುಬಂದಿದೆ. ಸಾಮಾನ್ಯವಾಗಿ ಸ್ತ್ರೀಯರು ಸೀರೆ ಬಣ್ಣ ಕೆಂಪು, ಜಾಂಬಳಿ, ಕಪ್ಪು, ಗುಲಾಬಿ ವರ್ಣಹೊಂದಿವೆ. ಕುಪ್ಪಸದಲ್ಲಿ ಕಪ್ಪು, ಕೆಂಪು, ಬಣ್ಣ ಬಳಸಲಾಗಿದೆ. ಗೋಪಿಕಾ ಸ್ತ್ರೀಯರು ಬುಟ್ಟಿಯು ಗುಲಾಬಿ ವರ್ಣದಿಂದ ಮೂಡಿಬಂದಿವೆ. ನಾಲ್ಕು ಜನಸ್ತ್ರೀಯರು ಮುತ್ತಿನ ಹಾರದೊಂದಿಗೆ ಹೋರಟಿರುವ ಹಾಗೆ ಮೂಡಿಬಂದಿದೆ. ಸ್ತ್ರೀಯರ ಎಡಗೈಯಲ್ಲಿ ಬೆಣ್ಣೆ ತುಂಬಿದ ಮಡಕೆಯ ಹಾಗೆ ಭಾಸವಾಗುವ ಹಾಗಿದೆ. ಈ ಕಲಾಕೃತಿಯಲ್ಲಿ ಮೇಲ್ಭಾಗದಲ್ಲಿ ಇಬ್ಬರು ಕೆಳಭಾಗದಲ್ಲಿ ಇಬ್ಬರ ಸ್ತ್ರೀಯರ ಚಿತ್ರಗಳು ಮೂಡಿವೆ. ಅಖಂಡವಾದ ಪಟ್ಟಿಕೆಯಲ್ಲಿ ತಳುಹಳದಿ ಹಿನ್ನೆಲೆಯ ಮೇಲೆ ಈ ಚಿತ್ರಗಳು ಕಂಡು ಬರುತ್ತವೆ.

**೫೦. ಗೋಪಿಕೆಯರ ಸೀರೆಯನ್ನು ಕದ್ದು ಮರವೇರಿ ಕುಳಿತ ಕೃಷ್ಣ (ಚಿತ್ರ ಸಂ. ೬೦)**

ಗೋಪಿಕೆಯರು ಯಮುನಾ ನದಿಯಲ್ಲಿ ಸ್ನಾನ ಮಾಡುತ್ತಿದ್ದು, ಕೃಷ್ಣನು ಅವರ ಸೀರೆಗಳನ್ನು ಕದ್ದು ಮರದ ಮೇಲೆ ಕುಳಿತಿದ್ದು ಕೊಳಲನ್ನು ಉದುತ್ತಿರುವುದು ಕಂಡುಬರುತ್ತದೆ. ನೀಲಿ ಮೈಬಣ್ಣ ಹೊಂದಿದ ಕೃಷ್ಣನು ಕಿರೀಟಧಾರಿಯಾಗಿ ಹಳದಿ ಪಂಚೆಯನ್ನು ಧರಿಸಿದ್ದಾನೆ. ಬೃಹತ್ತಾದ ಮರದಲ್ಲಿ ಚಿಕ್ಕಚಿಕ್ಕ ಎಲೆಗಳನ್ನು ರಚಿಸಿ ಕೃಷ್ಣನನ್ನು ಕೂಡಿಸಲಾಗಿದೆ. ಕೆಳಭಾಗದಲ್ಲಿ ಗೋಪಿಕೆಯರು. ಬೆತ್ತಲೆಯಾಗಿ ಮರವನ್ನು ಹತ್ತುವುದು ತಮ್ಮ ವಸ್ತ್ರಗಳನ್ನು ಪಡೆಯುವುದಕ್ಕೆ ಕೃಷ್ಣನಲ್ಲಿ ಪ್ರಾರ್ಥಿಸಿಕೊಳ್ಳುತ್ತಿದ್ದಾರೆ. ಇಲ್ಲಿ ಸ್ತ್ರೀಯರು ಹಳದಿವರ್ಣದಲ್ಲಿ ರಚನೆಯಾಗಿದ್ದು ಸಾಲಾಗಿ ಮರವನ್ನು ಹತ್ತುತ್ತಿದ್ದಾರೆ. ಮರದಲ್ಲಿ ಸ್ತ್ರೀಯರು ಬಟ್ಟೆಯನ್ನು ಹಳದಿ ಮತ್ತು ಕೆಂಪು ಬಣ್ಣಗಳಲ್ಲಿ ರಚಿಸಲಾಗಿದೆ. ಸ್ತ್ರೀಯರ ಕೋರಳಾಭರಣ ಮೂಗುತಿ ವೃತ್ತಾಕಾರದ ಸ್ತನಗಳು ರಚನೆಯಾಗಿವೆ. ಈ ಚಿತ್ರವು ಉದ್ದವಾದ ಪಟ್ಟಿಕೆಯಲ್ಲಿ ರಚನೆಯಾಗಿದ್ದು ಅಲ್ಲಲ್ಲಿ ಚಿಕ್ಕ ಚಿಕ್ಕ ಗಿಡ. ಹೂಗಳನ್ನು ರಚಿಸಿದ್ದಾರೆ. ಒಟ್ಟಾರೆ ವರ್ಣಗಳ ಸಾಂಗತ್ಯದ ಹಿತಾನುಭವವನ್ನು ನೀಡುತ್ತವೆ. ಸಂಯೋಜನೆಯು ಕಲಾತ್ಮಕವಾಗಿ ಮೂಡಿಬಂದಿದೆ.



**೫೩. ಯಮುನೆಯ ತೀರದಲ್ಲಿ ಆಟ ಆಡುತ್ತಿರುವ ದೃಶ್ಯ (ಚಿತ್ರ ಸಂ. ೬೩)**

ಇಲ್ಲಿ ಅಖಂಡವಾದ ಉದ್ದ ಪಟ್ಟಿಕೆಯಲ್ಲಿ ದನಗಾಹಿ ಕೃಷ್ಣನ ಸ್ನೇಹಿತರು ಹಾಗೂ ಗೋವುಗಳು ಮೂಡಿಬಂದಿವೆ. ಈ ಕಲಾಕೃತಿಯಲ್ಲಿ ಸರಣಿಚಿತ್ರದ ಹಾಗೆ ಎಲ್ಲ ಚಿತ್ರಗಳು ಮೂಡಿಬಂದಿವೆ. ಅಲ್ಲದೆ ಒಂದೇ ಭಂಗಿಯಲ್ಲಿವೆ. ಇಲ್ಲಿ ಕೃಷ್ಣನ ಸ್ನೇಹಿತರು ಮೊಳಕಾಲೂರಿ ಎರಡು ಕೈಗಳನ್ನು ಮೇಲಕ್ಕೆತ್ತಿದ್ದಾರೆ. ಹಿಂಭಾಗದ ಗೋವುಗಳೆಲ್ಲ ತಮ್ಮ ಮುಂಗಾಲನ್ನು ಮೇಲೆತ್ತಿ ದನಗಾಹಿಗಳು ನಿಂತ ಭಂಗಿಯ ಹಾಗೆ ಅನುಕರಣೀಯವಾಗಿ ಅದೆ ಭಂಗಿಯಲ್ಲಿ ನಿಂತಿವೆ. ಇಲ್ಲಿ ದನಗಾಹಿಗಳ ಮೈಬಣ್ಣ ತೆಳುಗುಲಾಬಿ. ತಿಳಿನೀಲಿ, ಕೆಂಪು, ಹಳದಿವಸ್ತ್ರ, ಕೆಂಪುರುಮಾಲೂ ಮೂಡಿಬಂದಿವೆ. ಗೋವುಗಳು ಹಳದಿ, ಕಂದು, ಬಿಳಿ, ವರ್ಣದಲ್ಲಿ ರಚನೆಯಾಗಿವೆ. ಚಿತ್ರಗಳ ಹಿನ್ನೆಲೆಯ ಖಾಲಿ ಜಾಗವನ್ನು ಎಲೆಹೂಗಳಿಂದ ತುಂಬಿಸಲಾಗಿದೆ.

**೫೪. ತೂಗುಯ್ಯಾಲೆಯಲ್ಲಿ ರಾಧಾ-ಕೃಷ್ಣ (ಚಿತ್ರ ಸಂ. ೬೪)**

ತೂಗುಯ್ಯಾಲೆಯಲ್ಲಿ ರಾಧಾಕೃಷ್ಣ ಇಬ್ಬರು ಎದುರು ಬದರು ನೋಟದಲ್ಲಿದ್ದಾರೆ. ಇಲ್ಲಿ ರಾಧೆಯು ಕೆಂಪು ಸೀರೆ, ಗಿಳಿಹಸಿರು ಕುಪ್ಪಸದೊಂದಿಗೆ ನಿಂತಿದ್ದಾಳೆ. ಕೃಷ್ಣನು ಅದೇ ಭಂಗಿಯಲ್ಲಿದ್ದು ಹಳದಿ ಪಂಚೆ ನೀಲಿ ಮೈಬಣ್ಣ ಹೊಂದಿದ್ದಾನೆ. ಕಿರೀಟಾಭರಣಧಾರಿಯಾದ ಕೃಷ್ಣ ಕೈಯಲ್ಲಿ ಸರಪಳಿಯನ್ನು ಹಿಡಿದಿದ್ದಾನೆ. ಇಬ್ಬರ ಕಾಲ ಕೆಳಗೆ ಮರದ ಹಲಗೆಯು ರೇಖೆ, ಚುಕ್ಕೆಗಳಿಂದ ತುಂಬಿಕೊಂಡಿದೆ. ಈ ತೂಗುಯ್ಯಾಲೆಯನ್ನು ಮರದ ಟೊಂಗೆಗಳಿಗೆ ಕಟ್ಟಿರುವುದು ಕಂಡುಬಂದಿದೆ. ಇಲ್ಲಿ ಮರವನ್ನು ಹಸಿರು ವರ್ಣದಿಂದ ರಚಿಸಿ ಅಲ್ಲಲ್ಲಿ ಕೆಂಪು ವರ್ಣದ ಹೂಗಳು ಕಂಡುಬರುತ್ತವೆ. ಈ ಚಿತ್ರದ ಹಿನ್ನೆಲೆಯಲ್ಲಿಯೂ ತೆಳು ಹಳದಿ ಮಿಶ್ರಿತ ಬಿಳಿವರ್ಣದಿಂದ ಕೂಡಿದೆ. ಸಂಯೋಜನೆಯ ದೃಷ್ಟಿಯಿಂದ ಈ ಚಿತ್ರ ಗಮನ ಸೆಳೆಯುತ್ತದೆ.

**೫೫. ರಾಧಾಕೃಷ್ಣರೊಳಗೊಂಡ ಅಲಂಕಾರಿಕ ಚಿತ್ರ (ಚಿತ್ರ ಸಂ. ೬೫)**

ಇಲ್ಲಿ ಸಾಲಾಗಿ ರಚನೆಯಾದ ಚಿತ್ರದ ಪಟ್ಟಿಕೆಯಲ್ಲಿ ಕೃಷ್ಣ ಹಾಗೂ ರಾಧೆಯು ನೃತ್ಯ ಭಂಗಿಯ ಹಾಗೂ ಎಲೆ ಬಳ್ಳಿಗಳಿಂದ ಕೂಡಿದ ಅಲಂಕಾರಿಕ ಚಿತ್ರಣವು ಇದ್ದು, ಇಲ್ಲಿ ಮೊದಲು ಮತ್ತು ಕೊನೆಯಲ್ಲಿ ಕೃಷ್ಣ ನೃತ್ಯ ಮಾಡುತ್ತಿರುವ. ಮಧ್ಯದಲ್ಲಿ ರಾಧೆ ನೃತ್ಯಭಂಗಿಯಲ್ಲಿ ಕೈಗಳನ್ನು ಸುರಳಿಆಕಾರದಲ್ಲಿ ಒಂದನ್ನೊಂದು ಹಿಡಿದುಕೊಂಡು ಕುಳಿತಿರುವ ಭಂಗಿ ಸುಂದರವಾಗಿ ಮೂಡಿದೆ. ಕೃಷ್ಣ ನೀಲಿ ಮೈಬಣ್ಣ ಹೊಂದಿದ್ದರೆ ರಾಧೆಯು ಹಳದಿ ಮೈಬಣ್ಣ ಹೊಂದಿದ್ದಾಳೆ. ಹಳದಿ ಪಂಚೆ ಕಿರೀಟಾಭರಣಧಾರಿಯಾದ ಕೃಷ್ಣ ತೆಳುಗುಲಾಬಿ. ಹಾಗೂ ಹಸಿರು ಸೀರೆ ತೊಟ್ಟ ರಾಧಾ ಚಿತ್ರಗಳು ಹಾಗೂ ಸುತ್ತಲು ಖಾಲಿ ಜಾಗವನ್ನು ಎಲೆಬಳ್ಳಿಯಿಂದ ತುಂಬಿಸಲಾಗಿದೆ. ಇದಕ್ಕೆ ಹೊರ ರೇಖೆಯಾಗಿ ಬಿಳಿವರ್ಣ ಉಪಯೋಗಿಸಲಾಗಿದೆ. ಈ ಎಲ್ಲಾ ಚಿತ್ರಗಳ ಹಿನ್ನೆಲೆ ಲೇಪನ ಕೆಂಪು ವರ್ಣದಾಗಿದ್ದು ಒಂದು ಚಿತ್ರದ ಮೇಲೊಂದರಂತೆ ಸಾಲಾಗಿ ರಚನೆಯಾಗಿವೆ. ಮೇಲ್ಭಾಗದ ರಾಧಾ ಕೃಷ್ಣರು ಕೈ ಕೈ ಹಿಡಿದುಕೊಂಡಿದ್ದರೆ ಕೆಳಭಾಗದಲ್ಲಿ ಕೆಳಭಾಗದಲ್ಲಿ ಕೈ ಸಡಲಿಸಿಕೊಂಡ ದೃಶ್ಯ ಕಂಡುಬರುತ್ತದೆ.



## ೫೬. ಹೂದೋಟದಲ್ಲಿ ರಾಧಾ ಕೃಷ್ಣರ ಸರಸ (ಚಿತ್ರ ಸಂ. ೬೬)

ವಿಷೇಶವಾಗಿ ಇಲ್ಲಿ ಕೃಷ್ಣನ ಮುಖ ಹಾಗೂ ಕಾಲುಗಳು ಮಾತ್ರ ನೀಲಿಯಾದರೆ ದೇಹ ಹಾಗೂ ಕೈಗಳು ನೀಲಿ ಮಿಶ್ರಿತ ಹಸಿರು ವರ್ಣದಿಂದ ಚಿತ್ರಿಸಲಾಗಿದೆ. ಕಿರೀಟಾಭರಣಧಾರಿಯಾದ ಕೃಷ್ಣನು ಕಾಲು ಮಡಚಿಕುಳಿತು. ಎಡಗೈಯನ್ನು ಮುಂಚಾಚಿದ್ದಾನೆ. ಕೆಂಪುವಸ್ತ್ರ ಹಳದಿ ಪಂಚೆ ಧರಿಸಿದ ಇವನು ರಾಧೆಯ ಮುಖವನ್ನು ನೇರನೋಟದಿಂದ ನೋಡುತ್ತಿರುವುದು ಕಂಡುಬಂದಿದೆ. ರಾಧೆಯು ಕೃಷ್ಣನಿಗೆ ಏನೋ ಹೇಳುವ ಹಾಗೆ ಕೃಷ್ಣನ ರಟ್ಟೆಹಿಡಿದು ಎಡಗೈಯಿಂದ ಅವನ ಮುಂಚಾಚಿದ ಕೈಯಲ್ಲಿ ಏನನ್ನೂ ನೀಡುವ ಭಾವನೆ ಕಂಡುಬರುತ್ತದೆ. ಗಿಳಿ ಹಸಿರು ಸೀರೆ, ಹಾಗೂ ಕೆಂಪು ಕುಪ್ಪಸ ತೊಟ್ಟ ರಾಧೆಯು ಎರಡು ಕಾಲು ಮೇಲಕ್ಕೆ ಮಡಚಿ ಕುಳಿತಿದ್ದಾಳೆ. ಇಬ್ಬರ ಮಧ್ಯದಲ್ಲಿ ದಟ್ಟ ಹಸಿರು ವರ್ಣದ ಹೂದೋಟ ಚಿತ್ರಿಸಿದ್ದು, ಇವುಗಳ ಎಲೆಗಳೂ ಸಹ ಅದೇ ವರ್ಣದಲ್ಲಿ ಮೂಡಿವೆ. ಇವುಗಳ ತುದಿಯಲ್ಲಿ ಅರಳಿದ ಹೂಗಳು ಮಾತ್ರ ಕೆಂಪಾಗಿವೆ. ಈ ಕಲಾ ಕೃತಿಯು ತೆಳು ಹಳದಿ ಹಿನ್ನೆಲೆಯ ಲೇಪನದ ಮೇಲೆ ಮೂಡಿಬಂದಿದೆ.

## ೫೭. ರಾಧೆಯ ಕೇಶಾಲಂಕರಣದಲ್ಲಿ ತೊಡಗಿದ ಕೃಷ್ಣ (ಚಿತ್ರ ಸಂ.೬೭)

ಈ ಕಲಾಕೃತಿಯಲ್ಲಿ ರಾಧೆಯು ಧರ್ಪಣ ಸುಂದರಿಯಹಾಗೆ ಕೈಯಲ್ಲಿ ಕನ್ನಡಿಯನ್ನು ಹಿಡಿದಿರುವುದು ಕೃಷ್ಣನು ರಾಧೆಯ ಜಡೆಯನ್ನು ಹೆಣೆಯುತ್ತಿರುವ ದೃಶ್ಯ ಮೂಡಿಬಂದಿದೆ. ರಾಧೆಯು ಅಲಂಕೃತಳಾಗಿ ವಿವಿಧ ಆಭರಣಧಾರಿಯಾಗಿದ್ದಾಳೆ. ಕೆಂಪು ಸೀರೆ ಹಾಗೂ ಹಳದಿ ಕುಪ್ಪಸ ತೊಟ್ಟ ರಾಧೆಯು ತನ್ನ ಸೌಂದರ್ಯವನ್ನು ಕನ್ನಡಿಯಲ್ಲಿ ಕೃಷ್ಣನನ್ನು ನೋಡುತ್ತಿರುವ ಹಾಗೇ ರಚಿಸಿದ್ದಾರೆ. ಅಲ್ಲದೆ ರಾಧೆಯ ಕೇಶವನ್ನು ಹೆಣೆಯುತ್ತಿರುವ ಕೃಷ್ಣ ರಾಧೆಯ ಕೈಯಲ್ಲಿರುವ ಕನ್ನಡಿಯಲ್ಲಿ ರಾಧೆಯ ಮುಖವನ್ನು ನೋಡುವ ಭಾವನೆಕಂಡು ಬರುತ್ತದೆ. ಇಲ್ಲಿ ಕೃಷ್ಣನ ನೀಲಿ ಮೈಬಣ್ಣ ಹೊಂದಿ ಕಿರೀಟಧಾರಿಯಾದ ಕೃಷ್ಣನು ಹಲವಾರು ಆಭರಣ ಧಾರಿಯಾಗಿದ್ದಾನೆ. ಹಳದಿ ಪಂಚೆತೊಟ್ಟ ಕೃಷ್ಣನು ರಾಧೆಯ ಹಿಂದೆ ಕುಳಿತಿರುವುದು ಕಂಡುಬರುತ್ತದೆ. ರಾಧೆಯು ಕಾಲು ಮಡಚಿ ಕುಳಿತಿದ್ದು ಕೃಷ್ಣನು ಎರಡು ಮೊಣಕಾಲು ಮೇಲೆ ಮಾಡಿ ಕುಳಿತಿದ್ದಾನೆ. ಇಲ್ಲಿ ರಾಧೆ ಮತ್ತು ಕೃಷ್ಣನ ಮಧ್ಯ ಗಿಡದ ಟೊಂಗೆಯೂ ರಚನೆಯಾಗಿದೆ ಅಲ್ಲದೆ ಅದರ ಟೊಂಗೆಗಳು ರಾಧೆಯ ಮುಂದೆ ಹಾಗೂ ಕೃಷ್ಣನ ಹಿಂದೆ ಭಾಗಿನಿಂತಿವೆ. ದಟ್ಟ ಹಸಿರು ವರ್ಣದ ಎಲೆಗಳನ್ನು ರಚಿಸುವದರೊಂದಿಗೆ ಕೆಂಪು ಹೂಗಳು ಮೂಡಿವೆ ಹಿನ್ನಲೆಯಲ್ಲಿ ಬಿಳಿ ವರ್ಣ ಲೇಪಿಸಲಾಗಿದೆ. ವರ್ಣ ವಿನ್ಯಾಸ ಹಿತಮಿತವಾಗಿದ್ದು ಸಂಯೋಜನೆಯು ಕಲಾತ್ಮಕವಾಗಿ ಮೂಡಿಬಂದಿವೆ.



## ೫೮. ಕೃಷ್ಣನ ಸೇವೆಯಲ್ಲಿ ನಿರತಳಾದ ರಾಧೆ (ಚಿತ್ರ ಸಂ.೬೮)

ಬೃಹತ್ತಾದ ಮಂಟಪದಲ್ಲಿ ಕೃಷ್ಣನು ಮಲಗಿಕೊಂಡು ಕೈಯಲ್ಲಿ ಪುಷ್ಪವನ್ನು ಹಿಡಿದಿದ್ದಾನೆ. ರಾಧೆಯು ಕೃಷ್ಣನ ಪಾದವನ್ನು ಒತ್ತುತ್ತಿರುವುದು ಕಂಡು ಬಂದಿದೆ. ಕಿರೀಟಾಆಭರಣಧಾರಿಯಾದ ಕೃಷ್ಣ ಒಂದು ಕಾಲು ಮಡಚಿ ಬಲಗಾಲನ್ನು ನೇರವಾಗಿ ಇಟ್ಟಿದ್ದಾನೆ. ರಾಧೆಯು ಅವನ ಕಾಲನ್ನು ಒತ್ತುತ ಅವನನ್ನು ನೋಡುತ್ತಿರುವಹಾಗೆ ಕಂಡುಬಂದಿದೆ. ಸುಂದರವಾದ ರಾಧೆಯು ಕೆಂಪು ಸೀರೆ. ಹಸಿರು ಕುಪ್ಪಸ ತೊಟ್ಟಿದ್ದಾಳೆ.



ಕೃಷ್ಣನು ತಲೆಯಾಸರವಾಗಿ ಕೆಂಪು ವರ್ಣದ ದಿಂಬನ್ನು ಇಟ್ಟುಕೊಂಡಿರುವುದು ಕಂಡುಬರುತ್ತದೆ. ಈ ಸನ್ನಿವೇಷ ರಾತ್ರಿಯ ನಡೆದಿದೆ ಎನ್ನುವ ಸಲುವಾಗಿ ಹಿನ್ನೆಲೆಯಾಗಿ ದಟ್ಟ ನೀಲಿ ವರ್ಣವನ್ನು ಬಳೆಯಲಾಗಿದೆ. ಮಂಟಪವು ಬಿಳಿ ವರ್ಣದಿಂದ ಕೊಡಿದ್ದು ಅಲ್ಲದೆ ಕಪ್ಪು ವರ್ಣದ ರೇಖೆಗಳು ಜೀವತುಂಬಿವೆ. ಅಕ್ಕ ಪಕ್ಕದ ಖಾಲಿಜಾಗವನ್ನು ಹಸಿರು ಎಲೆಗಳಿಂದ ತುಂಬಿಸಲಾಗಿದೆ. ಚಿತ್ರದ ಹಿನ್ನಲೆಯು ಕಲಾತ್ಮಕತೆಯಿಂದಾಗಿ ಚಿತ್ರಕ್ಕೆ ಹೆಚ್ಚಿನ ಜೀವಂತಿಕೆ ಬಂದಿದೆ.

**೫೯. ಋಷಿಮುನಿಗಳ ಜೊತೆ ರಾಮನ ಯೋಧರು (ಚಿತ್ರ ಸಂ.೬೯)**

ರಾಮಾಯಣದ ಒಂದು ಭಾಗವಾಗಿ ಈ ಚಿತ್ರ ರೂಪಿತಗೊಂಡಿದೆ. ಇಲ್ಲಿ ಹೆಚ್ಚು ಸೈನಿಕರು ಇದ್ದು ಇಬ್ಬರು ಸನ್ಯಾಸಿಗಳಹಾಗೆ ಬಲ ಭಾಗದ ತುದಿಯಲ್ಲಿ ಮೂಡಿಬಂದಿದ್ದಾರೆ. ಇವರು ಕೈಯಲ್ಲಿ ರುದ್ರಾಕ್ಷಿ ಸರ ಹಿಡಿದು ಕುಳಿತಿದ್ದಾರೆ. ಹಿಂಭಾಗದಲ್ಲಿ ಎಲ್ಲ ಸೈನಿಕರು ತಮ್ಮ ತಮ್ಮ ಆಯುಧಗಳನ್ನು ಕೈಯಲ್ಲಿ ಹಿಡಿದಿದ್ದಾರೆ ಇಲ್ಲಿ ಎಲ್ಲರ ವಸ್ತ್ರವಿನ್ಯಾಸ ಒಂದೇಯಾಗಿದ್ದು ಕೇಲವರು ಹಳದಿ ಪೇಟ ಮತ್ತೆ ಕೇಲವರು ಬಿಳಿಪೇಟಧರಿಸಿದ್ದು ಕಂಡುಬಂದಿದೆ. ಕೈಯಲ್ಲಿ ಕಪ್ಪು ಬಣ್ಣದ ಗುರಾಣಿ ಹಿಡಿದು ಕುಳಿತಿರುವ ಸೈನಿಕರು ಅದೇ ಸೈನಿಕರ ಕೇಳಭಾಗದಲ್ಲಿ ಗುರಾಣಿಯನ್ನು ಪಕ್ಕದಲ್ಲಿಟ್ಟಿರುವುದು ಕಂಡುಬಂದಿದೆ. ಇವರು ಕೈಯಲ್ಲಿ ಬಾಣವನ್ನು ಹಿಡಿದಿದ್ದಾರೆ. ಬೆನ್ನಿಗೆ ಬಿಲ್ಲನ್ನು ಹಾಕಿಕೊಂಡು ಮೊಂಡೆಯೂರಿ ಕುಳಿತಿದ್ದಾರೆ ಈ ಎಲ್ಲಾ ಚಿತ್ರಗಳ ಹಿನ್ನಲೆಯಲ್ಲಿ ಹಳದಿ ವರ್ಣವನ್ನು ಉಪಯೋಗಿಸಿದ್ದಾರೆ. ಒಟ್ಟಾರೆ ಚಿತ್ರದ ಕಲಾತ್ಮಕ ಸಂಯೋಜನೆ ವರ್ಣದ ಸಮತೋಲನತ್ವದ ಕಾರಣ ಚಿತ್ರ ಮೌಲಿಕವಾಗಿದೆ.

**೬೦. ರಾಮನ ಆಶೀರ್ವಚನ (ಚಿತ್ರ ಸಂ.೭೦)**

ಇಲ್ಲಿ ಶ್ರೀರಾಮನು ಸಹ ನೀಲಿಮೈಬಣ್ಣಹೊಂದಿ ಪೀಠದ ಮೇಲೆ ಕುಳಿತ್ತಿದ್ದಾನೆ. ಎದುರು ಸನ್ಯಾಸಿಗಳು ಹಾಗೂ ಆಂಜನೇಯ ಇರುವುದಾಗಿದೆ. ಆಂಜನೇಯನು ಶ್ರೀರಾಮನ ಕಾಲಿಗೆ ನಮಸ್ಕರಿಸುವುದಾಗಿ ಕೆಳಭಾಗದಲ್ಲಿ ಕಂಡುಬಂದಿದೆ. ಇವನು ಸಹ ನೀಲಿ ಮೈಬಣ್ಣಹೊಂದಿ ಕಿರೀಟ ಹಾಗೂ ಹಳದಿ ಬಣ್ಣದ ಚಡ್ಡಿಯನ್ನು ತೊಟ್ಟಿದ್ದಾನೆ. ಶ್ರೀರಾಮನು ಕೆಂಪುವಸ್ತ್ರ ಹಳದಿ ಪಂಚೆಯುಟ್ಟು ಕಾಲು ಮೇಲಕ್ಕೆತ್ತಿ ಕುಳಿತು ಬಲಗಾಲನ್ನು ಸ್ವಲ್ಪ ಇಳಿಬಿಡಲಾಗಿದೆ. ಸನ್ಯಾಸಿಗಳಿಗೆ ಅಭಯ ಹಸ್ತ ತೋರಿದ ಶ್ರೀರಾಮ ಕಿರೀಟಾಭರಣಧಾರಿಯಾಗಿ ಬೆನ್ನಿಗೆಬಿಲ್ಲು ಹಾಗೂ ಬಾಣಗಳನ್ನು ಹಾಕಿಕೊಂಡಿದ್ದಾನೆ. ಸನ್ಯಾಸಿಗಳೆಲ್ಲರೂ ಒಂದೇ ಭಂಗಿಯಲ್ಲಿದ್ದು ಬಲಗೈಯನ್ನು ಮೇಲೆತ್ತಿ ಶ್ರೀರಾಮನಿಗೆ ತೋರಿಸುವಹಾಗಿದೆ. ಇವರ ಮೈಬಣ್ಣ, ಪೇಟ, ಪಂಚೆ ಎಲ್ಲವೂ ಒಂದೇ ಬಣ್ಣದಲ್ಲಿ ಮೂಡಿಬಂದಿವೆ. ಈ ಚಿತ್ರದ ಹಿನ್ನೆಲೆ ಲೇಪನದಲ್ಲಿ ಸ್ವಲ್ಪ ಬದಲಾವಣೆ ಕಂಡುಬರುತ್ತವೆ. ಬಿಳಿ ವರ್ಣದ ಮೇಲೆ ಚಿತ್ರಗಳು ಮೂಡಿಬಂದಿವೆ. ಅಲ್ಲಲ್ಲಿ ಎಲೆ ಹೂಗಳು ಮೂಡಿಬಂದಿವೆ. ಹಾಗೇ ಆಂಜನೇಯನ ಮುಖವು ಕೆಂಪಾಗಿದ್ದು ಕಂಡು ಬರುತ್ತದೆ. ಶ್ರೀರಾಮ ಕುಳಿತ ಪೀಠ ಹಳದಿ ಹಾಗೂ ಗುಲಾಬಿ ಬಣ್ಣದಿಂದ ಕೂಡಿ ಕಪ್ಪು ರೇಖೆಯನ್ನು ಎಳೆಯಲಾಗಿದೆ. ಇಲ್ಲಿ ಚಿತ್ರದಲ್ಲಿ ರಾಮನಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿದ್ದು ಇನ್ನುಳಿದ ಪಾತ್ರಗಳು ಪೂರಕವಾಗಿ ಚಿತ್ರಣವಾಗಿದೆ. ಹೀಗಾಗಿ ಇದೊಂದು ವ್ಯಕ್ತಿ ಪ್ರದಾನ ಚಿತ್ರವೆನ್ನಬಹುದು.



## ೬೧. ನಾರದ, ಆಂಜನೇಯ-ಹಾಗೂ ಗರುಡ (ಚಿತ್ರ ಸಂ.೬೧)

ನಾರದ ಈತ ಶಿವನಪ್ರಣೆಯಿಲ್ಲದೆ ಯಜ್ಞ ಮಾಡಲು, ಯಜ್ಞಪಶುವು ಅದ್ಭುತವಾಗಿ ಬೆಳೆದು ಪ್ರಪಂಚವನ್ನು ಹಾಳು ಮಾಡತೊಡಗಿತು. ಕೊನೆಗೆ ಅದನ್ನು ಷಣ್ಮುಖದೇವರು ಹಿಡಿದು ದಾರಿಗೆ ತಂದರು. ಈತ ಶಿವನಿಗೆ ತಂತೀ ವಾದ್ಯಗಳನ್ನು ಕೇಳಿಸಿ ಸಂತೋಷಗೊಳಿಸಿ ಆತನೋಡನೆ ಸಲಿಗೆಯಾಗಿದ್ದನ್ನು ಅಲ್ಲದೆ ಇಲ್ಲಿ ರಚಿತವಾದ ನಾರದನು ವಿಚಿತ್ರವಿನ್ಯಾಸದ ಪೇಟಾ ಧರಿಸಿದ್ದು ಮೈಬಣ್ಣವಾಗಿ ಗೋದಿಗೆಂಪು ಬಳೆಯಲಾಗಿದೆ. ಹಾಗೆ ಹಳದಿಪಂಚೆಯೊಂದಿಗೆ ನಾರದನು ಕೈಯಲ್ಲಿ ತಂಬುರಿಯನ್ನು ಬಾರಿಸುತ್ತ ನಿಂತಿರುವ ದೃಶ್ಯವಾಗಿದೆ. ಹಾಗೆ ತಂಬುರಿಯ ಮೇಲ್ಬುದಿಯೂ ಕಿತ್ತುಹೋಗಿರುವುದರಿಂದ ಹೊರರೇಖೆಯು ಮಾತ್ರ ಉಳಿದಿವೆ. ಕೋರಳಲ್ಲಿ ಬಿಳಿಮುತ್ತಿನ ಸರ ಧರಿಸಿದ ನಾರದನಿದ್ದಾನೆ.

ಹಿಂಭಾಗದಲ್ಲಿ ಹನುಮಾನ್ ರಚನೆಯಾಗಿದ್ದು ನೀಲಿವರ್ಣವನ್ನು ಮೈ ಬಣ್ಣವಾಗಿ ಬಳೆಯಲಾಗಿದೆ. ಹಣೆಭಾಗದಿಂದ ಬಾಯಿಯವರೆಗೆ ಕೆಂಪು ಬಣ್ಣವಿದ್ದು ಕಿರೀಟಧಾರಿಯಾಗಿದ್ದಾನೆ. ಹಳದಿ ಚಡ್ಡಿ ತೊಟ್ಟಹನುಮಾನ್ ತೆಳುಗುಲಾಬಿ ವರ್ಣದ ವಸ್ತ್ರವನ್ನು ಧರಿಸಿದ್ದಾನೆ. ಹನುಮಾನ್ ಬಾಲವು ಮೇಲಕ್ಕೆ ಹೋಗಿದೆ. ಎರಡು ಕೈಗಳನ್ನು ಮುಂದೆ ಜೋಡಿಸಿದ ಈ ಚಿತ್ರದ ಹಿಂದೆ ಗರುಡನ ಚಿತ್ರವಿದೆ. ಇಲ್ಲಿ ಗುರುಡನು ಸಹ ಎರಡು ಕೈಗಳನ್ನು ಮುಂದೆ ಮಾಡಿ ನಿಂತಿರುವುದಲ್ಲಿದೆ ಕಿರೀಟಧಾರಿಯಾಗಿದ್ದಾನೆ. ಮನುಷ್ಯ ಪಂಚೆಯನ್ನು ಧರಿಸಿದ್ದು ಮಾತ್ರವಲ್ಲದೆ. ಆಭರಣಧಾರಿಯಾಗಿದ್ದಾನೆ. ಮೂರು ಚಿತ್ರಗಳ ಮಧ್ಯದ ಸ್ಥಳವನ್ನು ಗಿಡದ ಟೊಂಗೆಗಳಿಂದ ರಚಿಸಿ ಹಸಿರು, ಹಾಗೂ ಕೆಂಪು ಬಣ್ಣದಿಂದ ಹೂ, ಎಲೆಗಳನ್ನು ಬರೆಯಲಾಗಿದೆ. ತೆಳು ಹಳದಿ ಹಿನ್ನೆಲೆಯಲ್ಲಿ ಈ ಚಿತ್ರವು ಮೂಡಿಬಂದಿದೆ. ಚಿತ್ರದ ಪ್ರಮುಖ ಅಂಶವೆಂದರೆ ಬಣ್ಣಗಳ ಸಮತೋಲನವಿರುವುದರಿಂದ ದೃಷ್ಟಿ ಚಿತ್ರದ ಎಲ್ಲ ಭಾಗಕ್ಕೂ ಹರಡುತ್ತದೆ.

## ೬೨. ಗರುಡ ಮತ್ತು ಪುಷ್ಪಕ ವಿಮಾನ (ಚಿತ್ರ ಸಂ.೬೨)

ಕೃಷ್ಣನು ಪುಷ್ಪಕ ವಿಮಾನದಲ್ಲಿ ನಿಂತು ಬಲಗೈ ಮೇಲೆತ್ತಿ ಚಕ್ರ ಬಿಸುತ್ತಿರುವ ಹಾಗಿದೆ. ಮನುಷ್ಯರೂಪದ ಪುಷ್ಪಕ ವಿಮಾನವಾಗಿ ಎರಡು ರೆಕ್ಕೆಗಳನ್ನು ರಚಿಸಲಾಗಿದೆ. ಇಲ್ಲಿ ಗುರುಡನಿಗೆ ಭಾಗಿದ ಕೆಂಪು ಮೂಗು ರಚಿಸಿದ್ದು ಕಿರೀಟಾಭರಣಧಾರಿಯಾಗಿದ್ದಾನೆ. ಕೃಷ್ಣನು ಕೆಂಪು ವಸ್ತ್ರ ಹಳದಿ ಪಂಚೆ, ಹಳದಿ ಕಿರೀಟಾಭರಣಧಾರಿಯಾಗಿದ್ದಾನೆ. ಹಿನ್ನೆಲೆಯಲ್ಲಿ ಇಬ್ಬರು ಜೋತೆಗಾರರು ಇದ್ದು ಇಬ್ಬರ ಮೈಬಣ್ಣ ಕಿರೀಟ, ಪಂಚೆ ಎಲ್ಲವೂ ಒಂದೇ ವರ್ಣವಾಗಿವೆ. ಹಿಂಭಾಗದಲ್ಲಿ ಕೆಂಪು ವರ್ಣದ ಮಂಟಪವು ರಚನೆಯಾಗಿದ್ದು, ರೇಖೆ ಹಾಗೂ ಚುಕ್ಕೆಗಳಿಂದ ತುಂಬಿಕೊಂಡಿದೆ. ಕೃಷ್ಣನು ಗರುಡನ ಕೈಯಲ್ಲಿ ನಿಂತು ಹೋರಟಿರುವಹಾಗಿದೆ. ಹಿನ್ನೆಲೆ ಖಾಲಿ ಜಾಗದಲ್ಲಿ, ಸಣ್ಣ ಸಣ್ಣ ಎಲೆ, ಹೂ, ಹಾಗೂ ಮರಗಳು ಮೂಡಿಬಂದಿವೆ. ಈ ಎಲ್ಲಾ ಚಿತ್ರಗಳು ತೆಳು ಹಳದಿ ಹಿನ್ನೆಲೆಯ ಮೇಲೆ ಮೂಡಿಬಂದಿವೆ.

**೬೩. ವಾನರ ಸೈನ್ಯ (ಚಿತ್ರ ಸಂ.೭೩)**

ಇಲ್ಲಿ ಮಂಗಗಳ ಗುಂಪಿನಲ್ಲಿ ಹನುಮಾನ್, ವಾಲಿ,ಸುಗ್ರಿವರನ್ನು, ಕಾಣಬಹುದು. ಕೋರೆಹಲ್ಲು ಇಳಿಬಿದ್ದ ಮೀಸೆ ಕೈಯಲ್ಲಿ ಗಧೆಯಿರುವುದು ನೋಡಿದರೆ ಇದು ವಾಲಿ ಚಿತ್ರ ಇರಬಹುದು. ಮೇಲ್ಭಾಗದಲ್ಲಿ ಆಂಜನೇಯ ಇದ್ದು ಕಿರೀಟಹೊಂದಿ, ಹಳದಿ ಪಂಚೆ ಕೆಂಪು ವಸ್ತ್ರಧರಿಸಿದ್ದಾನೆ. ಮುಖವರ್ಣ ಕೆಂಪು ಹಳದಿವರ್ಣದಲ್ಲಿ ಚಿತ್ರಿತಗೊಂಡಿದೆ. ಇಬ್ಬರು ಕೈ ಜೋಡಿಸಿರುವುದು ಕಂಡುಬರುತ್ತದೆ. ಹಿಂಭಾಗದಲ್ಲಿ ರಚನೆಯಾದ ಮಂಗಗಳು ಒಂದೇ ಬಣ್ಣದಲ್ಲಿ ರಚನೆಯಾಗಿದ್ದು ವಿವಿಧ ಭಂಗಿಯಲ್ಲಿವೆ. ಕೈಯಲ್ಲಿ ದ್ರಾಕ್ಷಿ ಗೊಂಚಲು ಹಿಡಿದು ಓಡುವ, ಜಿಗಿಯುವ, ಹಾರುವ, ನೋಡುವ, ಕುಳಿತ್ತಿರುವ ಹಲವಾರು ಭಂಗಿಯಲ್ಲಿ ಮೂಡಿಬಂದಿವೆ. ಚಿತ್ರಗಳ ಖಾಲಿಜಾಗವನ್ನು ಹೂ ಎಲೆಯಿಂದ ತುಂಬಿಸಲಾಗಿದೆ. ಈ ಎಲ್ಲಾ ಚಿತ್ರಗಳ ಹಿನ್ನೆಲೆಯಲ್ಲಿ ತೆಳು ಬಿಳಿಮಿಶ್ರಿತ ಹಳದಿ ವರ್ಣ ಉಪಯೋಗಿಸಲಾಗಿದೆ.

**೬೪. ಆನೆಗಳು, ಅಲಂಕಾರಿಕ ಚಿತ್ರ. (ಚಿತ್ರ ಸಂ.೭೪)**

ಈ ಚಿತ್ರವು ಎತ್ತರದ ಅಳತೆಯಲ್ಲಿ ರಚಿತವಾಗಿದ್ದು ಎರಡು ದೈತ್ಯಾಕಾರದ ಆನೆಗಳನ್ನು ಚಿತ್ರಿಸಿಲಾಗಿದೆ. ಆನೆಗಳ ಮೈಬಣ್ಣಕ್ಕೆ ತೆಳು ನೀಲಿ ಅಲ್ಲಲ್ಲಿ ಕೇಸರಿ ಮಿಶ್ರಿತ ಕೆಂಪು ಬಣ್ಣವನ್ನು ಬಳಸಲಾಗಿದೆ. ಮತ್ತು ಆನೆಗಳನ್ನು ಬಲಿಷ್ಠವಾಗಿ ಉಗ್ರವಾಗಿ ದಟ್ಟವಾದ ಅರಣ್ಯದಲ್ಲಿರುವಂತೆ ಸುತ್ತಲು ಅಲಂಕಾರಿಕ ಗಿಡಮರಗಳು ಕೇಸರಿ, ಹಸಿರು, ಹಳದಿವರ್ಣಗಳಿಂದ ಚಿತ್ರಿಸಲಾಗಿದೆ. ಈ ಚಿತ್ರವು ಪ್ರಕೃತಿಸಂಬಂಧವಾದ ಅಲಂಕಾರಿಕ ಚಿತ್ರವಾಗಿದ್ದು ಬಹುಶಃ ಶುಭರಾಯರು ಮೈಸೂರಿನಲ್ಲಿ ಇದ್ದಾಗ ಕಂಡಿರುಬಹುದಾದ ಆನೆಗಳ ಮತ್ತು ಅಲ್ಲಿನ ಅರಣ್ಯ ಕಂಡು ಪ್ರಭಾವ ಬೀರಿ ಚಿತ್ರಿಸಿರಬಹುದೆಂದು ಹೂಹಿಸಲಾಗಿದೆ.

**೬೫. ವಿಷ್ಣುವಿನ ಚಿತ್ರ. (ಚಿತ್ರ ಸಂ.೭೫)**

ಈ ಚಿತ್ರವು ಸಹ ಕಾಗದದ ಮೇಲೆ ರಚನೆಗೊಂಡ ವಿಷ್ಣುವಿನ ಚಿತ್ರವಾಗಿದೆ. ಶುಭರಾಯರು ಈ ಚಿತ್ರದಲ್ಲಿ ಸಹ ಬಣ್ಣಗಳನ್ನು ಹಿತಮಿತವಾಗಿ ಬಳಸಿದ್ದಾರೆ. ಹಿನ್ನಲೆಯ ವಿನ್ಯಾಸವು ಎಲ್ಲಾ ಚಿತ್ರಗಳಿಗಿರುವಾಗೆ ಇಲ್ಲಿ ತನ್ನದೇ ಆದ ವಿಶಿಷ್ಠವಾದ ಶೈಲಿಯನ್ನು ಉಳಿಸಿಕೊಂಡು ಬಂದಿದ್ದಾನೆ. ಸಂಯೋಜನೆಯಲ್ಲಿ ಪ್ರಮುಖ ಸ್ಥಾನ ವಿಷ್ಣುವಿನಾಗಿದೆ. ಅವನ ಸುತ್ತಲೂ ಹಿನ್ನಲೆಯನ್ನು ಕಲಾತ್ಮಕವಾಗಿ ವಿನ್ಯಾಸಗೊಳಿಸಲಾಗಿದೆ. ಶುಭರಾಯರು ಜನಪದ ಮತ್ತು ಕಿರುರೂಪ ಚಿತ್ರಶೈಲಿಯ ಸಂಮಿಶ್ರಣದ ಶೈಲಿಯನ್ನು ಇಲ್ಲಿ ಗುರುತಿಸಬಹುದಾಗಿದೆ.

**ಶುಭರಾಯರ ಚಿತ್ರಗಳ ವಿಶ್ಲೇಷಣೆ ಮತ್ತು ದೋರಣೆ :**

ಭಕ್ತಿಪಂಥದ ಪ್ರಸಿದ್ಧ ಕವಿ ಸೂರ್‌ದಾಸ ಹಿಂದಿಯಲ್ಲಿ ಬರೆದಿರುವ ಪದಗಳ ಮತ್ತು ಶ್ರೀ ಶುಭರಾಯರ ಚಿತ್ರಕಲೆ ಎರಡಕ್ಕೂ ಮೂಲ ಆಕರ ಶ್ರೀಮದ್ಭಾಗವತ. ಹಾಗಾಗಿ ಸೂರದಾಸರ ಪದಗಳನ್ನು ಉಚ್ಚರದಿಮದ ಆಯ್ಕೆಮಾಡಿ ಶುಭರಾಯರು ಬರೆದಿರು ಚಿತ್ರಗಳೊಂದಿಗೆ ಪ್ರಕಟಿಸಿದರೆ ಅದು ಭಾರತೀಯ ಸಾಹಿತ್ಯ ಮತ್ತು ಕಲಾ ವಾಙ್ಮಯದಲ್ಲೇ ವಿಶಿಷ್ಟ ಕೃತಿಯಾಗಬಲ್ಲದೆ. ಸೂರದಾಸರ ಹಾಡುಗಳ ರಾಗಲಯಗಳನ್ನು ಶುಭರಾಯರ ಚಿತ್ರಗಳಲ್ಲೂ, ಶುಭರಾಯರ ಚಿತ್ರಗಳ ಧ್ವನಿಯನ್ನು ಸೂರದಾಸರ ಹಾಡುಗಳಲ್ಲೂ ಗುರುತಿಸಬಹುದು.



ಶುಭರಾಯರ ಚಿತ್ರರಚನೆಗಳು ಅದ್ಭುತವಾಗಿವೆ. ತಮ್ಮವೈಷ್ಣವ ಭಕ್ತಿಯ ಅಖಂಡವಾದ ಭಕ್ತಿ–ಭಾವದ ಅಭಿವ್ಯಕ್ತಿಗಾಗಿ ಶುಭರಾಯರು ಚಿತ್ರಮಾಧ್ಯಮವನ್ನು ಬಳಸಿಕೊಂಡಿದ್ದಾರೆ. ಅವರ ಈ ಸೃಷ್ಟಿಕ್ರಿಯೆಗೆ ವಿಷಯವಸ್ತು ಒದಗಿಸಿದ ಮೂಲ ಆಕರಗಳು– ಶ್ರೀಮದ್‌ಭಗವದ್ಗಿತ, ಮಹಾಪುರಾಣ, ರಾಮಾಯನ, ಗೀತಗೋವಿಂದ ಹಾಗೂ ಅನಂತವಾದ ಪ್ರಕೃತಿ, ಕೃಷ್ಣಜನ್ಮಾಷ್ಟಮಿ, ರಾಮನವಮಿ, ಆಷಾಢ ಹಾಗು ಕಾರ್ತೀಕ ಏಕಾದಶಿಯಂಥ ಹಬ್ಬ–ಹರಿದಿನಗಳಲ್ಲಿ ತಮ್ಮ ಮಠ ಹಾಗೂ ಪಾಂಡುರಂಗನ ಗುಡಿಯನ್ನು ತಮ್ಮ ಚಿತ್ರಗಳಿಂದ ಅವರು ಅಲಂಕರಿಸಿದ್ದರು.

ಈ ಚಿತ್ರರಚನೆಗೆ ಅವರು ಲೆಕ್ಕಪತ್ರ ಬರೆದಿಡುವ ಹಾಳೆಗಳನ್ನೂ ಉಪಯೋಗಿಸಿದ್ದಾರೆ. ಈ ಕಾಗದಕ್ಕೆ 'ವಹಿಖಾತಾ' ಎಂದು ಹೆಸರು. ಅಲ್ಲಲ್ಲಿ ಹರಿದಿರುವ ಈ ರಚನೆಗಳ ಅಡಿಯ ಹಾಳೆಗಳ ಮೇಲೆ ಮೋಡಿ ಅಕ್ಷರಗಳಲ್ಲಿ ಬರೆದಿರುವ ಲೆಕ್ಕ–ಪತ್ರಗಳನ್ನು ಕಾಣಬಹುದು. ಈ ಹಾಳೆಗಳನ್ನು ಒಂದರ ಮೇಲೊಂದು ಅಮಟಿಸಿ, ದಪ್ಪವಾಗುವಮತೆ ಮಾಡಿ ಅದನ್ನೇ ಕ್ಯಾನ್‌ವಾಸ್ ರೀತಿಯಲ್ಲಿ ಬಳಸಲಾಗಿದೆ. ಕೆಲವು ಚಿತ್ರಗಳಿಗೆ ಬಿದಿರಿನಕಟ್ಟುಹಾಕಿ ಕಾಗದಕ್ಕೆ ಸಾಕಷ್ಟು ಬಿಗಿಯನ್ನು ಒದಗಿಸಲಾಗಿದೆ. ಈ ಚಿತ್ರಗಳಿಗೆ ಬಿದಿರಿನ ಕಟ್ಟುಹಾಕಿ ಕಾಗದಕ್ಕೆ ಸಾಕಷ್ಟು ಬಿಗಿಯನ್ನು ಒದಗಿಸಲಾಗಿದೆ. ಈ ಚಿತ್ರಗಳು ತಮ್ಮ ಆಕಾರ ಮತ್ತು ಅಳತೆಯಲ್ಲಿ ಒಂದಕ್ಕೊಂದು ಭಿನ್ನವಾಗಿವೆ. ಪ್ರತಿವರ್ಷವೂ ಬೇರೆ ಬೇರೆ ಸಂದರ್ಭಗಳಲ್ಲಿ ಇವುಗಲ ಉಪಯೋಗವಾಗುತ್ತಿದ್ದರಿಂದ, ಶುಭರಾಯರುಹಳೆಯ ಚಿತ್ರಗಳ ಮೇಲ ಹೊಸ ಚಿತ್ರಗಳನ್ನು ಅಂಟಿಸಿರುವುದೂ ಉಂಟು.ಇದು ಪ್ರಕಟಿತಗೊಂಡಿರುವ ಕೆಲವು ರಚನೆಗಳಿಮದ ಸ್ಪಷ್ಟವಾಗುತ್ತದೆ.

ಶ್ರೀ ಶುಭರಾಯರು ಸಸ್ಯವರ್ಣಗಳನ್ನು ಉಪಯೋಗಿಸಿದ್ದು, ಇವು ಇಂದಿಗೂ ಹೊಚ್ಚ ಹೊಸದಾಗಿ ಕಾಣುತ್ತವೆ. ಕೆಂಪು, ಕಡುನೀಲಿ, ಕಪ್ಪು, ಕಡುಹಸುರು, ಹಳದಿ ಮತ್ತು ಶ್ವೇತವರ್ಣಗಳು ಈ ಚಿತ್ರಗಳ್ಲಲಿ ಎದ್ದು ಕಾಣುವು ಬಣ್ಣಗಳು. ಈ ಚಿತ್ರಗಳ ವರ್ಣ ಸಂಯೋಜನೆ ವೈವಿಧ್ಯದಿಂದ ಕೂಡಿದ್ದು, ಹಿತವಾಗಿಯೂ, ಆಕರ್ಷಕವಾಗಿಯೂ ಇದೆ. ತ್ರಿ–ಪದರ ಭ್ರಮೆ (Three dimenisional effect) ಹುಟ್ಟಿಸಲು ಶುಭರಾಯರು ಚಿತ್ರದ ಪಾತ್ರಗಳು, ಧರಿಸಿರುವ ಬಗ್ಗೆಗಳ ಅಲಂಕರಣಕ್ಕೆಂದು ಮಂದವಾದ ವರ್ಣಚಿಕ್ಕಗಳನ್ನಿಟ್ಟದ್ದಾರೆ. ಈ ಚಿಕ್ಕೆಗಳು ವ್ಯಕ್ತಿ ಚಿತ್ರಗಳು ಧರಿಸಿರುವ ವಸ್ತಗಳಿಗೆ ಅಲಂಕಾರ ವನ್ನೀಯುವುದರ ಜೊತೆಗೆ ಉಬ್ಬುಚಿತ್ರದ ಅನುಭವ ನೀಡುತ್ತವೆ. ಅಂತೆಯೇ ಅವು ಧರಿಸಿರುವ ಆಭರಣಗಳನ್ನೂ, ಅಲಂಕರಣ ಸಾಮಗ್ರಿಗಳನ್ನು ಇಂಥವೇ ಚಿಕ್ಕೆಗಳಿಂದ ತುಂಬಿದ್ದು, ಈ ಶೈಲಿ ಚಿತ್ರಗಳಿಗೂ, ವರ್ಣಸಂಯೋಜನಗೂ ವಿಶೇಷ ಪ್ರಭಾವ ತಂದಿದೆ.

ಇನ್ನೂ ಕೆಲವು ರಚನೆಗಳಲ್ಲಿ ಮೊದಲು ಒಂದು ಹಾಳೆಯ ಮೇಲೆ ಚಿತ್ರ ಬರೆದು, ಅದನ್ನು ಹಾಳೆಯಿಂದ ಕತ್ತರಿಸಿ, ಬೇರೆ ಕಾಗದದ ಮೇಲೆ ಅಂಟಿಸಿ, ಅನಂರತದಲ್ಲಿ ಅದರ ಹಿನ್ನೆಲೆಗೆ ಬಣ್ಣ ಹಾಕಲಾಗಿದೆ. ಹೀಗೆ ಮಾಡಿರುವುದರಿಂದ ಆ ಚಿತ್ರಗಳು ತಮ್ಮ ಹಿನ್ನೆಲೆಯಿಂದ ಎದ್ದು ನಿಂತಿರುವಮತೆ ಕಾಣುತ್ತದೆ. ಶ್ರೀ ಶುಭರಾಯರು ಚಿತ್ರಿಸಿರುವ ರಚನೆಗಳು ಸಾಮಾನ್ಯವಾಗಿ ತೋರವಾಗಿಯೂ, ಗುಂಡುಗುಂಡಾಗಿಯೂ ಇದ್ದರೂ ತಮ್ಮ ಆಂಗಿಕ ರಚನೆಯ ಅಳತೆಯಲ್ಲಿ ನಿಸ್ಕೃಷ್ಟವಾಗಿಯೂ,



ಶುಭರಾಯರ ಚಿತ್ರರಚನೆಗಳು ಅದ್ಭುತವಾಗಿವೆ. ತಮ್ಮವೈಷ್ಣವ ಭಕ್ತಿಯ ಅಖಂಡವಾದ ಭಕ್ತಿ-ಭಾವದ ಅಭಿವ್ಯಕ್ತಿಗಾಗಿ ಶುಭರಾಯರು ಚಿತ್ರಮಾಧ್ಯಮವನ್ನು ಬಳಸಿಕೊಂಡಿದ್ದಾರೆ. ಅವರ ಈ ಸೃಷ್ಟಿಕ್ರಿಯೆಗೆ ವಿಷಯವಸ್ತು ಒದಗಿಸಿದ ಮೂಲ ಆಕರಗಳು- ಶ್ರೀಮದ್‌ಭಗವದ್ಗಿತ, ಮಹಾಪುರಾಣ, ರಾಮಾಯನ, ಗೀತಗೋವಿಂದ ಹಾಗೂ ಅನಂತವಾದ ಪ್ರಕೃತಿ, ಕೃಷ್ಣಜನ್ಮಾಷ್ಟಮಿ, ರಾಮನವಮಿ, ಆಷಾಢ ಹಾಗು ಕಾರ್ತೀಕ ಏಕಾದಶಿಯಂಥ ಹಬ್ಬ-ಹರಿದಿನಗಳಲ್ಲಿ ತಮ್ಮ ಮಠ ಹಾಗೂ ಪಾಂಡುರಂಗನ ಗುಡಿಯನ್ನು ತಮ್ಮ ಚಿತ್ರಗಳಿಂದ ಅವರು ಅಲಂಕರಿಸಿದ್ದರು.

ಈ ಚಿತ್ರರಚನೆಗೆ ಅವರು ಲೆಕ್ಕಪತ್ರ ಬರೆದಿಡುವ ಹಾಳೆಗಳನ್ನೂ ಉಪಯೋಗಿಸಿದ್ದಾರೆ. ಈ ಕಾಗದಕ್ಕೆ 'ವಹಿಖಾತಾ' ಎಂದು ಹೆಸರು. ಅಲ್ಲಲ್ಲಿ ಹರಿದಿರುವ ಈ ರಚನೆಗಳ ಅಡಿಯ ಹಾಳೆಗಳ ಮೇಲೆ ಮೋಡಿ ಅಕ್ಷರಗಳಲ್ಲಿ ಬರೆದಿರುವ ಲೆಕ್ಕ-ಪತ್ರಗಳನ್ನು ಕಾಣಬಹುದು. ಈ ಹಾಳೆಗಳನ್ನು ಒಂದರ ಮೇಲೊಂದು ಅಮಟಿಸಿ, ದಪ್ಪವಾಗುವಮತೆ ಮಾಡಿ ಅದನ್ನೇ ಕ್ಯಾನ್‌ವಾಸ್ ರೀತಿಯಲ್ಲಿ ಬಳಸಲಾಗಿದೆ. ಕೆಲವು ಚಿತ್ರಗಳಿಗೆ ಬಿದಿರಿನಕಟ್ಟುಹಾಕಿ ಕಾಗದಕ್ಕೆ ಸಾಕಷ್ಟು ಬಿಗಿಯನ್ನು ಒದಗಿಸಲಾಗಿದೆ. ಈ ಚಿತ್ರಗಳಿಗೆ ಬಿದಿರಿನ ಕಟ್ಟುಹಾಕಿ ಕಾಗದಕ್ಕೆ ಸಾಕಷ್ಟು ಬಿಗಿಯನ್ನು ಒದಗಿಸಲಾಗಿದೆ. ಈ ಚಿತ್ರಗಳು ತಮ್ಮ ಆಕಾರ ಮತ್ತು ಅಳತೆಯಲ್ಲಿ ಒಂದಕ್ಕೊಂದು ಭಿನ್ನವಾಗಿವೆ. ಪ್ರತಿವರ್ಷವೂ ಬೇರೆ ಬೇರೆ ಸಂದರ್ಭಗಳಲ್ಲಿ ಇವುಗಲ ಉಪಯೋಗವಾಗುತ್ತಿದ್ದರಿಂದ, ಶುಭರಾಯರುಹಳೆಯ ಚಿತ್ರಗಳ ಮೇಲ ಹೊಸ ಚಿತ್ರಗಳನ್ನು ಅಂಟಿಸಿರುವುದೂ ಉಂಟು.ಇದು ಪ್ರಕಟಿತಗೊಂಡಿರುವ ಕೆಲವು ರಚನೆಗಳಿಮದ ಸ್ಪಷ್ಟವಾಗುತ್ತದೆ.

ಶ್ರೀ ಶುಭರಾಯರು ಸಸ್ಯವರ್ಣಗಳನ್ನು ಉಪಯೋಗಿಸಿದ್ದು, ಇವು ಇಂದಿಗೂ ಹೊಚ್ಚ ಹೊಸದಾಗಿ ಕಾಣುತ್ತವೆ. ಕೆಂಪು, ಕಡುನೀಲಿ, ಕಪ್ಪು, ಕಡುಹಸುರು, ಹಳದಿ ಮತ್ತು ಶ್ವೇತವರ್ಣಗಳು ಈ ಚಿತ್ರಗಳ್ಲಲಿ ಎದ್ದು ಕಾಣುವು ಬಣ್ಣಗಳು. ಈ ಚಿತ್ರಗಳ ವರ್ಣ ಸಂಯೋಜನೆ ವೈವಿಧ್ಯದಿಂದ ಕೂಡಿದ್ದು, ಹಿತವಾಗಿಯೂ, ಆಕರ್ಷಕವಾಗಿಯೂ ಇದೆ. ತ್ರಿ-ಪದರ ಭ್ರಮೆ (Three dimenisional effect) ಹುಟ್ಟಿಸಲು ಶುಭರಾಯರು ಚಿತ್ರದ ಪಾತ್ರಗಳು, ಧರಿಸಿರುವ ಬಗ್ಗೆಗಳ ಅಲಂಕರಣಕ್ಕೆಂದು ಮಂದವಾದ ವರ್ಣಚಿಕ್ಕಗಳನ್ನಿಟ್ಟಿದ್ದಾರೆ. ಈ ಚಿಕ್ಕೆಗಳು ವ್ಯಕ್ತಿ ಚಿತ್ರಗಳು ಧರಿಸಿರುವ ವಸ್ತಗಳಿಗೆ ಅಲಂಕಾರ ವನ್ನೀಯುವುದರ ಜೊತೆಗೆ ಉಬ್ಬುಚಿತ್ರದ ಅನುಭವ ನೀಡುತ್ತವೆ. ಅಂತೆಯೇ ಅವು ಧರಿಸಿರುವ ಆಭರಣಗಳನ್ನೂ, ಅಲಂಕರಣ ಸಾಮಗ್ರಿಗಳನ್ನು ಇಂಥವೇ ಚಿಕ್ಕೆಗಳಿಂದ ತುಂಬಿದ್ದು, ಈ ಶೈಲಿ ಚಿತ್ರಗಳಿಗೂ, ವರ್ಣಸಂಯೋಜನಗೂ ವಿಶೇಷ ಪ್ರಭಾವ ತಂದಿದೆ.

ಇನ್ನೂ ಕೆಲವು ರಚನೆಗಳಲ್ಲಿ ಮೊದಲು ಒಂದು ಹಾಳೆಯ ಮೇಲೆ ಚಿತ್ರ ಬರೆದು, ಅದನ್ನು ಹಾಳೆಯಿಂದ ಕತ್ತರಿಸಿ, ಬೇರೆ ಕಾಗದದ ಮೇಲೆ ಅಂಟಿಸಿ, ಅನಂರತದಲ್ಲಿ ಅದರ ಹಿನ್ನೆಲೆಗೆ ಬಣ್ಣ ಹಾಕಲಾಗಿದೆ. ಹೀಗೆ ಮಾಡಿರುವುದರಿಂದ ಆ ಚಿತ್ರಗಳು ತಮ್ಮ ಹಿನ್ನೆಲೆಯಿಂದ ಎದ್ದು ನಿಂತಿರುವಮತೆ ಕಾಣುತ್ತದೆ. ಶ್ರೀ ಶುಭರಾಯುರು ಚಿತ್ರಿಸಿರುವ ರಚನೆಗಳು ಸಾವಾನ್ಯವಾಗಿ ತೋರವಾಗಿಯೂ, ಗುಂಡುಗುಂಡಾಗಿಯೂ ಇದ್ದರೂ ತಮ್ಮ ಆಂಗಿಕ ರಚನೆಯ ಅಳತೆಯಲ್ಲಿ ನಿಷ್ಕೃಷ್ಟವಾಗಿಯೂ,



ಮೊನಚಾತಗಿಯೂ ಇವೆ. ನೀಳವಾದ ಕಣ್ಣುಗಳೂ, ಮೊನಚಾದ ನಾಸಿಕ ಮತ್ತು ಆರ್ಕಕವಾದ ಮುಖಭಾವವಿರುವ ಈ ಚಿತ್ರಗಲು ಮನಸೂರೆಗೊಳ್ಳುತ್ತವೆ. ನೃತ್ಯ ಮಾಡುತ್ತಿರುವಮತೆ ರಚನೆಯಾಗಿರುವ ಚಿತ್ರಗಳು, ಸಂಗೀತದ ಲಯಕ್ಕೆ ಸರಿಸಮವಾದ ಭಾವ-ಭಂಗಿಯೊಡನೆ ಮಿತವಾಗಿರುವೆ. ರಾಧಾ, ಕೃಷ್ಣ ಗೋಪಿಯುರ ನೃತ್ಯ ಮತ್ತು ಪ್ರೇಮ ಸಲ್ಲಾಪಗಳನನು ಕುರಿತ ಚಿತ್ರಗಳಂತೂ ಮತ್ತೆ ಮತ್ತೆ ನೋಡಬೇಕೆನಿಸುವಂಥವು.

ಭಾಲಕೃಷ್ಣ, ಗೊಲ್ಲಕೃಷ್ಣ, ರಾಧಾ, ಗೋಪ-ಗೋಪಿಯರು ಅವರ ಲೀಲೆಗಳೂ, ಗೋವುಗಳು, ದಂತಿಗಳು ರಾಮ, ಶೀತೆ, ಹನುಮಂತ ಮತ್ತು ಋಷಿಗಳು ಈ ಎಲ್ಲ ರಚನೆಗಳೂ ತುಂಬಾ ಸುಂದರವಾಗಿವೆ. ಅನೇಕ ರಚನೆಗಳಲ್ಲಿ ಸುತ್ತಲಿನ ಸನ್ನಿವೇಶವನ್ನು ಹೂವಿನ ಗಿಡಿಗಳು, ಬಳ್ಳಿಗಳು ಮತ್ತು ಅಲೆಗಳು ತುಂಬಿದ್ದು, ಪ್ರಕೃತಿಯ ಸನ್ನಿವೇಶಕ್ಕೂ ಹೊಸ ಸೌಂದರ್ಯವನ್ನು ಒದಗಿಸುತ್ತವೆ. ಈ ಕಾರಣದಿಂದಲೇ ಶ್ರೀ ಶುಭರಾಯರ ಪ್ರತಿಯೊಂದು ಕಲಾಪ್ರದರ್ಶನದಲ್ಲೂ ಸುಂದರ, ಬಹುಸುಂದರ, ಅದ್ಭುತ ಎಂಬ ಉದ್ಗಾರಗಳು ನೀರಿಕ್ಷಕರಿಂದ ಕೇಳಿಬರುತ್ತವೆ.[೧]

ಶುಭರಾಯರ ಬಹುತೇಕ ಕಲಾಕೃತಿಗಳ ವಸ್ತು, ಕೃಷ್ಣನ ಲೀಲೆಗಳು ಅವುಗಳನ್ನು ಚಿಕಣಿ ಚಿತ್ರಶೈಲಿ ಎಂದು ಕರೆಯಬಹುದು. ಚಿಕಣಿ ಚಿತ್ರಗಳ ಮೂರು ಪ್ರಮುಖ ಗುಣಗಳೆಂದರೆ ಖಚಿತ ಅಂಗ ಸ್ವರೂಪ, ಮನೋಹರವಾದ ರೇಖಾವಿನ್ಯಾಸ ಹಾಗೂ ಭಾವಪೂರ್ಣ ಮುಖಾಭಿವ್ಯಕ್ತಿ. ಚಿಕಣಿ ಚಿತ್ರಕಲೆಯು ಈ ಮೂಲಭೂತ ಗುಣಗಳು ಶುಭರಾಯರು ಎಲ್ಲಾ ಕಲಾಕೃತಿಗಳಲ್ಲೂ ಪ್ರಧಾನವಾಗಿ ಮೇಳೈಸಿವೆ. ಈ ಕೃತಿಗಳು ಕೃಷ್ಣನ ಲೀಲೆಗಳನ್ನು ವಿವಿಧ ಹಂತಗಳಲ್ಲಿ ಹಾಗೂ ವಿಭಿನ್ನ ಅವಸ್ಥೆಗಳಲ್ಲಿ ಬಿಂಬಿಸಿವೆ. ಬಾಲಕೃಷ್ಣ, ತುಂಟಹುಡುಗ ಅವನ ಚೇಷ್ಟೆಗಳು, ಅವನ ತಾಯಿ ಯಶೋಧೆ ಹಾಗೂ ಗೋಪಿಕೆಯರನ್ನು ಒಮ್ಮೊಮ್ಮೆ ಹತಾಶರನ್ನಾಗಿ ಮತ್ತೊಮ್ಮೆ ಆನಂದಭರಿತರನ್ನಾಗಿ ಮಾಡುತ್ತವೆ. ಹಾಲು, ಮೊಸರು ಮತ್ತು ಬೆಣ್ಣೆಯನ್ನು ಕದಿಯುವುದು ಅವನ ಜನ್ಮಸಿದ್ಧ ಹಕ್ಕು. ತಾವು ಸಂಗ್ರಹಿಸಿದ ಹಾಲು, ಮೊಸರು ಹಾಗೂ ಬೆಣ್ಣೆಯನ್ನು ಮಾರಲು ಮಥುರೆಗೆ ಹೊರಟ ಗೋಪಿಕೆಯರನ್ನು ಅಡ್ಡಗಟ್ಟಿ ಕೊಳ್ಳೆಹೊಡೆಯುತ್ತಾನೆ. ಈ ಬಾಲಕೃಷ್ಣನನ್ನು ಶುಭರಾಯರು ಕೃಷ್ಣನು ಇಂಥ ಸಂಪ್ರದಾಯಬದ್ಧವಾದ ವರ್ಣರಂಜಿತ ಕಥೆಗಳನ್ನು ಅತ್ಯಂತ ಆಕರ್ಷಿಣೀಯವಾಗಿ ಚಿತ್ರಿಸಿದ್ದಾರೆ. ಈ ಕಲಾಕೃತಿಗಳಲ್ಲಿ ಲಯಬದ್ಧವಾದ ವರ್ಣಶೋಭೆಯು ವೀಕ್ಷಕರ ಗಮನವನ್ನು ಸುಲಭವಾಗಿ ಸೆಳೆಯುತ್ತದೆ. ರಾಧ-ಕೃಷ್ಣರ ಅಮರ ಪ್ರೇಮದ ವಸ್ತುವುಳ್ಳ ಕಲಾಕೃತಿಗಳು ಶುಭರಾಯರ ಮಹಾನ್‌ಕೃತಿಗಳಾಗಿವೆ. ಕೃಷ್ಣನು ಪ್ರೇಮ ಸ್ವರೂಪಿ. ಅವನ ಪ್ರೇಮ ಎಲ್ಲರನ್ನೂ ಎಲ್ಲವನ್ನೂ ಒಳಗೊಂಡಿರುವಂಥದು. ರಾಧೆ ಮತ್ತು ಕೃಷ್ಣರನ್ನು ಅಗಲಿಸಲು ಅಸಾಧ್ಯ. ಅವರಿಬ್ಬರೂ ಪರಸ್ಪರ ಜಗಳವಾಡುವವರು ಮತ್ತೆ ಅನುರಾಗಮಯವಾಗಿ ಒಂದಾಗುವರು. ಅವರಿಬ್ಬರೂ ಒಂದಾಗುವುದಷ್ಟೇ ಅಲ್ಲ ಅವರ ಜಗಳವು ಕೂಡಾ ತನ್ನದೇ ಆದ ಸೌಂದರ್ಯ ಹಾಗೂ ಲವಲವಿಕೆಯನ್ನು ಹೊಂದಿದೆ. ಈ ಮಾಲಿಕೆಯ ಎರಡು ಪ್ರಮುಖ ಕಲಾಕೃತಿಗಳು ಬಹಳ ಜನಪ್ರಿಯವಾಗಿವೆ.

---

೧. ಅ.ಲ. ನರಸಿಂಹನ್ (ಸಂ) : ಸಂತಕಲಾವಿದ ಶುಭರಾಯರು ಪು. ೩೧-೩೨-೩೩



'ಮೂಕವಿಸ್ಮಿತ ರಾಧಾ' ಕೃತಿಯು ಎಲ್ಲಾ ದೃಷ್ಟಿಗಳಿಂದಲೂ ಉತ್ಕೃಷ್ಟವಾಗಿದೆ. ದಟ್ಟ ಕೆಂಪುಬಣ್ಣದ ಸೀರೆಯ ವಿನ್ಯಾಸವು ಚಿತ್ರವನ್ನು ನೋಡಿದಾಕ್ಷಣ ಮನಃಸೆಳೆಯುತ್ತದೆ. ಈ ದಟ್ಟ ಕೆಂಪಿನ ಹಿನ್ನಲೆಯಾಗಿ ಬೆಳೆದುನಿಂತ ಮರಗಳು ಮತ್ತು ಹರಿದ್ವರ್ಣದ ಎಲೆಗಳು ಇಡೀ ಚಿತ್ರಕ್ಕೆ ವಿಶೇಷ ಸೊಬಗನ್ನು ತಂದಿವೆ. ರಾಧೆಯ ನಿರುದ್ವೇಗ ಹಾಗೂ ಮೌನಭಾವವನ್ನು ಪದಗಳಲ್ಲಿ ಬಣ್ಣಿಸಲು ಅಸಾಧ್ಯ. ಈ ಕೃತಿಯನ್ನು ವೀಕ್ಷಿಸುವಾಗ ಕೃತಿಯ ನಾಯಕ ರಾಧಾ ಹಾಗೂ ವೀಕ್ಷಕರಿಬ್ಬರೂ ಮೂಕವಿಸ್ಮಿತರಾಗಿ ಬಿಡುತ್ತಾರೆ.[2] ಅಂಥ ವೈಶಿಷ್ಟ್ಯ ಈ ಕಲಾಕೃತಿಯಲ್ಲಿ ಮಿಳಿತಗೊಂಡಿವೆ.

ರಾಧಾ-ಕೃಷ್ಣರ ದೈವಿಕ ಪ್ರೇಮದಾಟವೇ ಕೃಷ್ಣಲೀಲೆ. ತಮ್ಮ ಆರಾಧ್ಯ ಮೂರ್ತಿ ಕೃಷ್ಣ ಸಂಗಕ್ಕಾಗಿ ವಿರಹೋತ್ಕಂಠಿತರಾಗಿ ಪರಿತಪಿಸುವ ಗೋಪಿಕೆಯರ ಚಿತ್ರಣ ಒಂದು ರಮ್ಯ ಕಾವ್ಯವಾಗಿದೆ. ಶುಭರಾಯರ ಕೃತಿಗಳಲ್ಲಿ ಸಹ ಕೃಪಳಾಗಿರುವ ಕೃಷ್ಣನು ಭವ್ಯ ಹಾಗೂ ಸರ್ವಶಕ್ತನಾಗಿದ್ದಾನೆ. ಕರುಣೆ ಹಾಗೂ ಕ್ಷಮಾಶಾಲಿಯಲ್ಲಿ ಮೆರೆದಿದ್ದಾನೆ. ಆದ್ದರಿಂದಲೇ ಇಂಥ ಘನತೆಯುಳ್ಳ ಸಂಪನ್ಮೂಲ ಮೂರ್ತಿಯಲ್ಲಿ ರಾಧಾ ಹಾಗೂ ಗೋಪಿಕಾ ಸ್ತ್ರೀಯರು ಸಹಜವಾಗಿಯೇ ನೆಮ್ಮದಿಯನ್ನು ಕಾಣುತ್ತಾರೆ. ರಾಧಾ ಮತ್ತು ಗೋಪಿಕೆಯರಿಗೆ ಕೃಷ್ಣನ ದರ್ಶನವೇ ಹುರುಪು-ಹುಮ್ಮಸ್ಸಿನ ನೆಲೆಯಾಗುತ್ತದೆ. ತಮ್ಮ ಬದುಕನ್ನು ಪವಿತ್ರಗೊಳಿಸುತ್ತದೆ. ತಮ್ಮ ಕೃತಿಗಳಲ್ಲಿ ರಾತ್ರಿಯಾಗುವ ಪರಿಣಾಮವನ್ನು ಸೂಚಿಸಲು ಶುಭರಾಯರು ಕಪ್ಪು ಹಾಗೂ ನೀಲಿ ಬಣ್ಣಗಳನ್ನು ಹಿನ್ನಲೆಯಾಗಿ ಬಳಸಿದ್ದಾರೆ.[3]

ಶುಭರಾಯರು ದಕ್ಷಿಣ ಭಾರತದವರಾದರು ಉತ್ತರ ಭಾರತದ ಸಾಂಪ್ರದಾಯಕ ಆಭರಣ, ವೇಷ-ಭೂಷಣಗಳು ಹಾಗೂ ಕ್ರೀಡೆಗಳನ್ನು ಅಧ್ಯಯನ ಮಾಡಿದ್ದಾರೆಂಬುದು ಅವರ ಕೃತಿಗಳನ್ನು ಗಮನಿಸಿದಾಗ ವ್ಯಕ್ತವಾಗುತ್ತದೆ. ದಖ್ಖನಿ ಶೈಲಿಯಲ್ಲಿ ಶುಭರಾಯರು ಸೀರೆಗಳು ಹಾಗೂ ಆಭರಣಗಳನ್ನು ಚಿತ್ರಿಸಿದ್ದಾನೆ. ಚಿತ್ರಗಳ ಹಿನ್ನಲೆಗೆ ದಖ್ಖನಿ ವಾಸ್ತುಶೈಲಿಯನ್ನು ಅನೇಕ ಚಿತ್ರಗಳಿಗೆ ಆಯ್ಕೆಮಾಡಿಕೊಂಡಿದ್ದಾನೆ. ದಖ್ಖನಿ ಸೀರೆಯ ಶೈಲಿಯಂದರೆ ಮಹಾರಾಷ್ಟ್ರದ ಸಾಂಪ್ರದಾಯಕ ಸೀರೆಗಳ ಶೈಲಿಯೇ ಆಗಿದೆ. ರಾಧೆ ಧರಿಸಿದ ಆಭರಣಗಳು ಒರಿಸ್ಸಾ ರಾಜ್ಯದ ಜನಪ್ರಿಯ ಆಭರಣಗಳೆ ಆಗಿವೆ. ಹೀಗಾಗಿ ಶುಭರಾಯರು ದೇಶದ ವಿವಿಧ ಪ್ರದೇಶಗಳ ಜನರ ಒಡನಾಟವನ್ನು ಹೊಂದಿರುವು ಸ್ಪಷ್ಟವಾಗುತ್ತದೆ.

* * *

---

೨. ಅ.ಲ. ನರಸಿಂಹನ್ (ಸಂ) : ಸಂತಕಲಾವಿದ ಶುಭರಾಯರು ಪು. ೦೫

೩. ಅ.ಲ. ನರಸಿಂಹನ್ (ಸಂ) : ಸಂತಕಲಾವಿದ ಶುಭರಾಯರು ಪು. ೦೫



ಚಿತ್ರ ೧೦ ತಾಯಿ ಯಶೋಧೆಯ ಜೊತೆ ಕೃಷ್ಣ ಬಲರಾಮ



ಚಿತ್ರ 11 ಯಶೋಧಾ ಮಾತೆ ಜೊತೆ ಕೃಷ್ಣನು ಬೆಣ್ಣೆ ನೀಡುತ್ತಿರುವ ದೃಶ್ಯ



ಚಿತ್ರ 12 ರಕ್ಕಸಿ ಪೂತನಿಯನ್ನು ಸಂಹರಿಸುತ್ತಿರುವ ಬಾಲಕೃಷ್ಣ



ಚಿತ್ರ 13 ಮಜ್ಜಿಗೆ ಕಡೆಯಲು ತಾಯಿಗೆ ಸಹಕರಿಸುತ್ತಿರುವ ಕೃಷ್ಣ



ಚಿತ್ರ 14 ತಾಯಿಯ ಜೊತೆ ಕುಳಿತ ಕೃಷ್ಣನ ಹತ್ತಿರ ಹೋಗುತ್ತಿರುವ ಗೋಪಿಕೆಯರು



ಚಿತ್ರ ೧೫ ಕೃಷ್ಣನನ್ನು ಶಿಕ್ಷಿಸುತ್ತಿರುವ ಯಶೋಧೆ ಮತ್ತು ಗೋಪಿಕೆಯರು



ಚಿತ್ರ ೧೬ ಕೃಷ್ಣ ಮತ್ತು ಕೂರ್ಮ



ಚಿತ್ರ ೧೭ ಯಮುನಾ ನದಿಯ ತೀರದಲ್ಲಿ ತನ್ನ ಸ್ನೇಹಿತರೊಡನೆ ಚೆಂಡನಾಡುತ್ತಿರುವ ಕೃಷ್ಣ



ಚಿತ್ರ ೧೮ ಕೃಷ್ಣನ ದನಗಾಹಿ ಬಾಲ್ಯ ಸ್ನೇಹಿತರು



ಚಿತ್ರ ೧೯ ಯಮುನಾ ನದಿಯ ತೀರದಲ್ಲಿ ಗೋವುಗಳೊಡನೆ ಕೃಷ್ಣನ ಸ್ನೇಹಿತ



ಚಿತ್ರ ೨೦ ಕೃಷ್ಣನ ಕೊಳಲುನಾದವನ್ನು ಆಲಿಸುತ್ತಿರುವ ಗೋವುಗಳ ಗುಂಪು



ಚಿತ್ರ ೨೧ ಕಾಳಿಂಗ ಮರ್ದನಗೈದು ತಮ್ಮ ಪತಿಯರನ್ನು ಕಾಪಾಡುವಂತೆ ಪ್ರಾರ್ಥಿಸುತ್ತಿರುವ ಕನ್ಯೆಯರು



ಚಿತ್ರ ೨೨ ಗೋವುಗಳೊಡನೆ
ಕೃಷ್ಣನ ಬಾಲ್ಯ ಸ್ನೇಹಿತರು



ಚಿತ್ರ ೨೩ ಹಾಲು ಮಾರಲು
ಹೊರಟಿರುವ ಗೊಲ್ಲರು



ಚಿತ್ರ ೨೪ ಕಾಳಿಂಗ ಮರ್ದನ



ಚಿತ್ರ ೨೫ ಕೃಷ್ಣನನ್ನು ಪ್ರಾರ್ಥಿಸುತ್ತಿರುವ ಮತ್ಸ ಕನ್ಯೆಯರು



ಚಿತ್ರ ೨೬ ಕೃಷ್ಣನ ವಸ್ತ್ರಾಭರಣವನ್ನು ವರ್ಣಿಸುತ್ತಿರುವ ಗೋಪಿಕೆಯರು



ಚಿತ್ರ ೨೭ ಅಕ್ರೂರನು ತನ್ನ ರಥದಲ್ಲಿ ಕಂಸನನ್ನು ಕಾಣಲು ಮಥುರೆಗೆ ಹೊರಟದ್ದು, ಗೋಪಿಕೆಯರು ತಡೆಯುತ್ತಿರುವ ದೃಶ್ಯ



ಚಿತ್ರ ೨೮ ಸಂಗೀತದಲ್ಲಿ ಮಗ್ನರಾದ ರಾಧಾ ಕೃಷ್ಣ



ಚಿತ್ರ ೨೯ ರಾಧಾ ಕೃಷ್ಣರ ಸರಸ - ವಿರಸ



ಚಿತ್ರ 30 ರಾಧಾ ಕೃಷ್ಣರ ಸರಸ



ಚಿತ್ರ 31 ಕೃಷ್ಣ ಮತ್ತು ರಾಧಾ
ಅಜರಾವರಿಸುವ ದೃಶ್ಯ



ಚಿತ್ರ 32 ಕೃಷ್ಣನು ರಾಧಾಳ ಆಲಿಂಗನಕ್ಕೆ
ತಯಾರಾಗುವ ದೃಶ್ಯ



ಚಿತ್ರ 33 ಕೃಷ್ಣ ಮತ್ತು ರಾಧೆಯ ಜೋಡಿ



ಚಿತ್ರ 34 ಯಮುನಾ ನದಿಯ ತೀರದ ಮರಳಿನಲ್ಲಿ ಗೋಪಿಕೆಯರ ಜೊತೆ ನೃರ್ತಿಸುತ್ತಿರುವ ಕೃಷ್ಣ



ಚಿತ್ರ 35 ಕೃಷ್ಣನ ಕಲ್ಪನಾ ಲೋಕದಲ್ಲಿ ರಾಧೆ



ಚಿತ್ರ 36 ಕೃಷ್ಣನ ರಾಸ-ಲೀಲೆ



ಚಿತ್ರ 37 ಕೃಷ್ಣನ ರಾಸ-ಲೀಲೆ



ಚಿತ್ರ 38 ಸಂಭ್ರಮಿಸುತ್ತಿರುವ ಗೋಪಿಕೆಯರು



ಚಿತ್ರ 39 ರಾಸ–ಲೀಲೆ: ನೃತ್ತಿಸುತ್ತಿರುವ ಕೃಷ್ಣ ಮತ್ತು ಗೋಪಿಕೆಯರು



ಚಿತ್ರ 40 ಕೃಷ್ಣನ ಕೊಳಲಿನ ನಾದವನ್ನು ಆಲಿಸುತ್ತಿರುವ ಗೋವುಗಳು



ಚಿತ್ರ 41 ಗೋಪಿಕೆಯರ ನೃತ್ಯ



ಚಿತ್ರ 42 ರಾಸ–ಲೀಲೆಯಲ್ಲಿ
ಕೃಷ್ಣ ಮತ್ತು ಗೋಪಿಕೆಯರು



ಚಿತ್ರ 43 ಮೇಲಿಂದ ಕೆಳಗೆ:
(1)ನಿರಾಕರಿಸಿದ ರಾಧಾಳನ್ನು ಕೃಷ್ಣ ಒತ್ತಾಯ ಪಡಿಸುವ ದೃಶ್ಯ
(2) ರಾಧಾ ಕೃಷ್ಣನ ಕಿವಿಯನ್ನು ಹಿಡಿದು ಶಿಕ್ಷಿಸುವ ದೃಶ್ಯ
(3) ಕೃಷ್ಣನ ಸೇವೆಯಲ್ಲಿ ನಿರತಳಾದ ರಾಧೆ



ಚಿತ್ರ 44 ಕೃಷ್ಣನ ಮನವಲಿಸುತ್ತಿರುವ ರಾಧೆ (ಎಡಬದಿ)    ಕೃಷ್ಣನಿಗೆ ಬಿಸಣಿಕೆ ಬಿಸುತ್ತಿರುವ ರಾಧೆ (ಬಲಬದಿ)



ಚಿತ್ರ 45 ರಾಧೆಯನ್ನು ಸಮಾಧಾನ ಪಡಿಸುತ್ತಿರುವ ಕೃಷ್ಣ (ಎಡಬದಿ)
ಬೆಳದಿಂಗಳಿನಲ್ಲಿ ರಾಧಾ ಕೃಷ್ಣರ ಸರಸ (ಬಲಬದಿ)



46 [illegible]



ಚಿತ್ರ 47 ರಾಧಾ ಕೃಷ್ಣರ ಪ್ರೇಮಲೀಲೆ



ಚಿತ್ರ 48 ರಾಗ ಅನುರಾಗಲೀಲೆ : ರಾಧಾ ಕೃಷ್ಣ



ಚಿತ್ರ 49 ಕೋಪಿಸಿಕೊಂಡ ಕೃಷ್ಣನಿಗೆ ಪ್ರೀತಿಯಿಂದ ಸಮಾಧಾನ ಪಡಿಸುತ್ತಿರುವ ರಾಧೆ



ಚಿತ್ರ 50 ಕೃಷ್ಣನು ಕೊಳಲನ್ನು ನುಡಿಸಿ ರಾಧೆಯನ್ನು ಸಂತೋಷ ಪಡಿಸುತ್ತಿರುವುದು



ಚಿತ್ರ 51 ಗೋಪಿಕೆಯರ ಕೋಲಾಟದ ದೃಶ್ಯ



ಚಿತ್ರ 52 ಕೃಷ್ಣನನ್ನು ಹುಡುಕುತ್ತಿರುವ ಗೋಪಿಕೆಯರು



ಚಿತ್ರ 53 ರಾಧಾ ಕೃಷ್ಣರ ನೃತ್ಯ



ಚಿತ್ರ 54 ಪೂಜೆಯ ಸಿದ್ಧತೆಯಲ್ಲಿ ಗೋಪಿಕೆಯರು



ಚಿತ್ರ 55 ಕೃಷ್ಣನ ಕೊಳಲುನಾದವನ್ನು ಕೇಳಿ ಸಮ್ಮೋಹಗೊಂಡ ಗೋಪಿಕೆಯರು



ಚಿತ್ರ 56 ಕೃಷ್ಣನ ಬರುವಿಕೆಯನ್ನು ಆತುರದಿಂದ ಕಾಯುತ್ತಿರುವ ಗೋಪಿಕೆಯರು



ಚಿತ್ರ 57 ಗೋಪಿಕೆಯರನ್ನು ಅಡ್ಡಗಟ್ಟಿ ನಿಂತಿರುವ ಕೃಷ್ಣ



ಚಿತ್ರ 58 ಗೋಪಿಕೆಯರನ್ನು ಅಡ್ಡಗಟ್ಟಿ ನಿಂತಿರುವ ಕೃಷ್ಣ ಮತ್ತು ಬಲರಾಮ



ಚಿತ್ರ 59 ಹಾಲು, ಮೊಸರು, ಬೆಣ್ಣೆ ಮಾರಲು
ಹೊರಟಿರುವ ಗೋಪಿಕೆಯರು



ಚಿತ್ರ 60 ಗೋಪಿಕೆಯರ ಸೀರೆಯನ್ನು
ಕದ್ದು ಮರವೇರಿ ಕುಳಿತ ಕೃಷ್ಣ



ಚಿತ್ರ 61 ಗೋಪಿಕೆಯರೊಡನೆ ಕೃಷ್ಣನ ಸರಸ



ಚಿತ್ರ 62 ಕೃಷ್ಣನ ಕೊಳಲುನಾದವನ್ನು ಆಲಿಸುತ್ತಿರುವ ಗೋವುಗಳು



ಚಿತ್ರ 63
ಯಮುನೆಯ ತೀರದಲ್ಲಿ
ಆಟವಾಡುತ್ತಿರುವ ದೃಶ್ಯ



ಚಿತ್ರ 64
ತೂಗುಯ್ಯಾಲೆಯಲ್ಲಿ
ರಾಧಾ–ಕೃಷ್ಣ



ಚಿತ್ರ 65
ರಾಧಾ ಕೃಷ್ಣರೊಳಗೊಂಡ
ಅಲಂಕಾರಿಕ ಚಿತ್ರ



ಚಿತ್ರ 66 ಹೂದೋಟದಲ್ಲಿ ರಾಧಾ ಕೃಷ್ಣರ ಸರಸ



ಚಿತ್ರ 67 ರಾಧೆಯ ಜಡೆ ಹೆಣೆಯುತ್ತಿರುವ ಕೃಷ್ಣ



ಚಿತ್ರ 68 ಕೃಷ್ಣನ ಸೇವೆಯಲ್ಲಿ ನಿರತಳಾದ ರಾಧೆ



ಚಿತ್ರ 69 ಋಷಿ ಮುನಿಗಳ ಜೊತೆ ರಾಮನ ಯೋಧರು



ಚಿತ್ರ 70 ರಾಮನ ಆಶೀರ್ವಚನ



ಚಿತ್ರ 72 ಗರುಡ ಮತ್ತು ಪುಷ್ಪಕ ವಿಮಾನ



ಚಿತ್ರ 73 ವಾನರ ಸೈನ್ಯ



ಚಿತ್ರ 74 ಆನೆಗಳು (ಅಲಂಕಾರಿಕ ಚಿತ್ರ)



ಚಿತ್ರ 74 ವಿಷ್ಣು ದೇವ



ಅಧ್ಯಾಯ : ಐದು

## ಸಂತ ಶುಭರಾಯರ ಚಿತ್ರಕಲಾಕೃತಿಗಳ ತಂತ್ರ, ಶೈಲಿ, ಪ್ರಭಾವ, ಮತ್ತು ಪ್ರೇರಣೆ.

ಮಾನವನು ತನ್ನ ಭಾವನೆಗಳನ್ನು ಅಭಿವ್ಯಕ್ತ ಪಡಿಸಲು ಆಶ್ರಮಿಸಿದ ಕಲಾ ಪ್ರಕಾರಗಳಲ್ಲಿ ಚಿತ್ರಕಲೆಯೂ ಒಂದು. ತಾನು ಕಂಡುಂಡ ಅನುಭವಗಳ ಅಭಿವ್ಯಕ್ತಿಯಾದ ಯಾವೊಂದು ಕಲೆಯೂ ಇದ್ದಕ್ಕಿದ್ದಂತೆ ಶಿಷ್ಟರೂಪದಲ್ಲಿ ಪ್ರಕಟವಾಗಲಾರದು. ಜನಪದರ ಕಲೆಗಳೇ ಸಂಸ್ಕಾರಗೊಳ್ಳುತ್ತ ಶಿಷ್ಟರೂಪ ಪಡೆಯುತ್ತವೆ. ಶಿಲಾಯುಗದ ಮಾನವನಿಗೆ ತಾನುಬೇಟೆಯಾಡಿದ ಪ್ರಾಣಿಗಳು ಬಳಸಿದ ಬಾಣದಂತಹ ಉಪಕರಣಗಳೆ ಚಿತ್ರಗಳಿಗೆ ವಸ್ತುಗಳಾಗಿವೆ. ಆತನ ಮನೋವಿಲಾಸವನ್ನು ಮತ್ತು ಜೀವನ ರೀತಿಯನ್ನು ಅರ್ಥೈಸುವಲ್ಲಿ ಈ ಚಿತ್ರಗಳು ನೇರವಾಗುತ್ತವೆ . ಎಂಬ ಮಾತುಗಳೂ ಅರ್ಥಪೂರ್ಣವಾಗಿವೆ. ಇಂದು ನಾವು ಶುಭರಾಯರ ಕಲಾಕೃತಿಯಲ್ಲಿ ಶಿಷ್ಟಪದ ಚಿತ್ರಕಲೆಯನ್ನು ಗುರುತಿಸಬಹುದಾದರೂ ಇದರ ಹಿಂದೆ ಜನಪದ ಕಲೆಗಳ ಸಾಗರದಿಂದ ಕವಲೊಡೆದ ಟೊಂಗಿಯಂತೆ ಶಿಷ್ಟಪದ ಕಲೆಯು ಬೆಳೆದು ಬಂದಿದೆ.

ಸಂಗೀತವು ಮಾನವನ ಬದುಕನ್ನು ಪರಿಪೂರ್ಣಗೊಳಿಸುವ ಕಲೆಯೆಂದು ಹೇಳಿರುವಂತೆಯೇ ಚಿತ್ರಕಲೆಯೂ ಕೂಡ ಮಾನವನ ಬದುಕನ್ನು ಪರಿಪೂರ್ಣಗೊಳಿಸುವ ದಿವ್ಯ ಕಲೆಯಾಗಿದೆ. ಇದಕ್ಕೆ ಉದಾಃ ಸಂತ ಶುಭರಾಯರು ಒಬ್ಬರು. ಇವರು ತಮ್ಮ ಕಲೆಯಲ್ಲಿಯೇ ಇಷ್ಟ ದೇವರನ್ನು ಕಂಡವರಾಗಿದ್ದಾರೆ. ಅಲ್ಲದೇ ಇವರು ಗಾಯಕ, ಕವಿ, ಚಿತ್ರಕಲಾವಿದ, ಹಾಗೆಯೇ ಸಂಸ್ಕೃತ, ತೆಲುಗು, ತಮಿಳು, ಕನ್ನಡ, ಉರ್ದು, ಪಾರ್ಸಿ ಭಾಷೆಗಳನ್ನು ಕಲಿತವರು.

ಸಂತ ಶುಭರಾಯರ ಕಲಾಕೃತಿಯಲ್ಲಿ ವಿಶಿಷ್ಟವಾದ ಅವರದೇ ಆದ ಶಿಷ್ಟ ಜಾನಪದದ ಸಮ್ಮಿಶ್ರ ಶೈಲಿಯ ಕೊಡುಗೆಯಿದ್ದು, ಆಧುನಿಕ ಖ್ಯಾತ ಕಲಾವಿದನಾದ ಆಲಮೇಲಕರರ ಮೇಲೂ ಶುಭರಾಯರ ಕಲಾಕೃತಿಗಳ ಪ್ರಭಾವ ಬೀರಿವೆ. ಈ ಚಿತ್ರಗಳನ್ನು ಅವರು ಏತಕ್ಕಾಗಿ ನಿರ್ಮಿಸಿದರು. ಎಂಬುದನ್ನು

---

೧. ಡಾ. ಶೀಲಾಕಾಂತ ಪತ್ತಾರ : ಬಾದಾಮಿ ಸಾಂಸ್ಕೃತಿಕ ಅಧ್ಯಯನ ಪುಟ.೧೮೫.

೨. ಪಿ: ಆರ್. ತಿಪ್ಪೇಸ್ವಾಮಿ :ಸಂತ,ಕಲಾವಿದ ಶುಭರಾಯರು. ಪುಟ. ೧



ಮೊದಲಿಗೆ ತಿಳಿದು ಕೊಳ್ಳಬೇಕಾದ ವಿಷಯ. ಶುಭರಾಯರಿಗೆ ಚಿತ್ರಕಲೆ ಹಸ್ತಗತವಾಗಿದ್ದ ವಿದ್ಯೆ, ಭಕ್ತಿಪೂರ್ವಕವಾಗಿ ವಿಠಲನ ಮಂಟಪದ ಅಲಂಕಾರಕ್ಕಾಗಿಯೇ ಈ ಚಿತ್ರಗಳನ್ನು ಅವರು ನಿರ್ಮಿಸಿದರೇ ವಿನಹ "ಚಿತ್ರಗಳು" ಎಂದು ನಿಶ್ಚಿತವಾಗಿಯೂ ಅಲ್ಲ. ಅಂದರೆ ಸಂತ ಶುಭರಾಯರು ಮೊದಲೂ ಚಿತ್ರಕಲಾವಿದರೆ, ಆದರೆ ಚಿತ್ರಕಲಾಕೃತಿಗಳನ್ನು ರಚಿಸಬೇಕೆಂಬ ಭಾವನೆಯಿಂದ ರಚಿಸಿದ ಕಲಾಕೃತಿಗಳಲ್ಲ, ದೇವರ ಆರಾಧನೆಗಾಯಿ ಈ ಕಲೆಯನ್ನು ಬಳಸಿಕೊಂಡವರು. ಆದರೂ ಹಿಂದಿನ ದಿನಮಾನಗಳಲ್ಲಿ ಇಂತಹ ಉತ್ಕೃಷ್ಟ ಮಟ್ಟದ ಕಲಾಕೃತಿಯನ್ನು ರಚಿಸಿದ್ದು ಗಮನಿಸಿದರೆ ಇಂದಿನ ದಿನಮಾನಕ್ಕೆ ಒಂದು ಮಹತ್ವದ ಕಲಾಸೇವೆ ಅಥವಾ ಕೊಡುಗೆ ನೀಡಿದ್ದಾರೆ ಎಂದರೆ ತಪ್ಪಾಗಲಿಕ್ಕಿಲ್ಲ, ಕರ್ನಾಟಕದ ದೃಶ್ಯಕಲೆಯ ಇತಿಹಾಸದಲ್ಲಿ ಮುಂದೆ ಬರುವಂತಹ ಯುವ ಪೀಳಿಗೆಗೆ ಇವು ಉತ್ತಮ ಉದಾಹರಣೆಯಾಗಿವೆ. ಇಷ್ಟ ದೇವರನ್ನು ಮನಃಪೂರ್ವಕವಾಗಿ ಪೂಜಿಸುವುದರೊಂದಿಗೆ ದೇವರ ಮಂಟಪವನ್ನು ಸುಂದರವಾದ ಅಲಂಕಾರದಿಂದ ಶೃಂಗರಿಸಿ ಅದರೊಂದಿಗೆ ಅನೇಕಾನೇಕ ಪೌರಾಣಿಕ, ವಿಷಯಗಳ ಚಿತ್ರಬಿಡಿಸಿ ಇಷ್ಟದೇವರನ್ನು ಪೂಜಿಸಿದ್ದಾರೆ. ಈ ಅಲಂಕಾರಗೊಳಿಸುವುದರೊಂದಿಗೆ ಈ ಚಿತ್ರಕಲಾವಿದನ ಕಲಾಕೃತಿಗಳು ಬೆಳೆದು ನಿಂತಿವೆ.:

ಶ್ರೀಕೃಷ್ಣನು ಭಾರತದ ದೇವರುಗಳಲ್ಲಿ ಬಹಳ ಪ್ರಸಿದ್ಧಿ ಪಡೆದು ವಿಶ್ವಮಾನ್ಯ ಹಾಗೂ ಭಗವಾನ್ ವಿಷ್ಣುವಿನ ಎಂಟನೇ ಅವತಾರವೆಂದು ವಂದಿಸಲ್ಪಟ್ಟಿದ್ದಾನೆ. ತನ್ನದೇ ವೈಶಿಷ್ಟವನ್ನು ಪಡೆದ ಭಗವಾನ್ ಕೃಷ್ಣನು ಏಕ ಭಕ್ತಿಪಂಥಗಳಿಗೆ ಕೇಂದ್ರಬಿಂದುವಾಗಿದ್ದಾನೆ. ಈ ಪಂಥಗಳು ಕಳೆದ ಹಲವಾರು ಶತಮಾನಗಳಲ್ಲಿ ಧಾರ್ಮಿಕ ಕವಿತೆಗಳು ಸಂಗೀತ ಮತ್ತು ಚಿತ್ರಗಳ ಧನರಾಶಿಯನ್ನು ತುಯಾರು ಮಾಡಿದ್ದಾರೆ. ಕೃಷ್ಣನ ನೃತ್ಯ ಕಥೆಗಳ ಮೂಲ ಸೂತ್ರವೆಂದರೆ ಮಹಾಭಾರತ. ಹರಿವಂಶ ಭಾಗವತ ಪುರಾಣದ ಹತ್ತು ಹಾಗೂ ಹನ್ನೊಂದನೇ ಪುಸ್ತಕವು ಮತ್ತು ಹನ್ನೆರಡನೆಯ ಶತಮಾನದ ಜಯದೇವರ ಗೀತಗೋವಿಂದ ಕೃತಿಗಳು ಕೃಷ್ಣನ ಜೀವನವನ್ನು ನಾವು ನಾಲ್ಕು ಮುಖ್ಯ ಭಾಗಗಳಾಗಿ ವಿಭಜಿಸಬಹುದು.

೧. ಬಾಲ್ಯಾವಸ್ಥೆ : ಈ ಅವಸ್ಥೆಯಲ್ಲಿ ಅವನ ಶಕ್ತಿಯ ಅದ್ಭುತ ಕೌಶಲ್ಯಗಳನ್ನು ತೋರಿಸಿದ್ದು.

೨. ತಾರುಣ್ಯಾವಸ್ಥೆ : ಇದರಲ್ಲಿ ಅವನು ಗೋಪಿಯರೊಡನೆ ಬಹಳವಾಗಿ ಶೋಭಿಸಿದನು.

೩. ಪ್ರೌಢಾವಸ್ಥೆ : ಅವನು ಯಾವ ಕಾರ್ಯಕೋಸ್ಕರ ಅವತರಿಸಿದನೋ ಆ ಕಾರ್ಯಗಳನ್ನು ನೆರವೇರಿಸಿದ್ದು.

೪. ಮಧ್ಯವಯಸ್ಕನಾಗಿ : ಮಹಾಭಾರತ ಯುದ್ಧದಲ್ಲಿ ಅರ್ಜುನನ ಸಾರಥಿಯಾಗಿ ಧರ್ಮ ಹಾಗೂ ಭಕ್ತಿಯ ಮೇಲೆ ಭಗವದ್ಗೀತೆಯನ್ನು ಉಪದೇಶಿಸಿ ಯುದ್ಧದಲ್ಲಿ ಪಾಲ್ಗೊಂಡದ್ದು.

ಶ್ರೀ ಶುಭರಾಯರ ಚಿತ್ರಗಳು ಅವನ ಬಾಲ್ಯಾವಸ್ಥೆ ಹಾಗೂ ಪ್ರೌಢಾವಸ್ಥೆಯನ್ನು ಕೇಂದ್ರಿಕೃತವಾಗಿ ಮಾಡಲ್ಪಟ್ಟಿವೆ. ಬಾಲಕ ಕೃಷ್ಣನು ಕೈ ಮೊಣಕಾಲುಗಳ ಮೇಲೆ ಚಲಿಸುತ್ತಾ ಅಥವಾ ಆನಂದದಿಂದ ಬೆಣ್ಣೆಯ ಚೆಂಡನ್ನು ಕೈಯಲ್ಲಿ ಹಿಡಿದುಕೊಂಡು ಕುಣಿಯುತ್ತಾ ಇರುವ ದೃಶ್ಯವನ್ನು ಚಿತ್ರಗಳ ಮೂಲಕ ರೇಖಿಸಿದ್ದಾರೆ.

---

೩. ಎಸ್.ಸಿ. ದೇಸಾಯಿ: ಪ್ರಜಾಮತ, ನವೆಂಬರ್, ಪುಟ ೧೨೭೭೧೯೮೩



ತರುಣ ಕೃಷ್ಣನು ಆಕರ್ಷಕ ಧೈವ ಪ್ರೇಮಿ. ಅವನು ಗೋಪಿಕಾ ಕನ್ಯಯರಿಂದ ಹಾಗೂ ಗೋವುಗಳಿಂದ ಸುತ್ತುಹಾಕಲ್ಪಟ್ಟು ಕೊಳಲನೂದುವ ದೃಶ್ಯ. ಶ್ರೀ ಶುಭರಾಯರ ಹೆಚ್ಚಿನ ಚಿತ್ರಗಳು ಕೃಷ್ಣ ಗೋಪಿಯರ ಅತ್ಯಾನಂದದ ಸ್ಥಿತಿಯ ಮೇಲೆ ಆಧಾರಿತವಾಗಿವೆ. ಈ ಪ್ರೇಮವು ಐಚ್ಛಿಕವಾಗಿದ್ದು ತಮ್ಮನ್ನು ತಾವು ಮರೆತ ಸ್ಥಿತಿಯಲ್ಲಿವೆ. ಕೃಷ್ಣನು ಪ್ರೇಮಿಸುತ್ತಾನೆ ಹಾಗೂ ಪ್ರೇಮಿಸಲ್ಪಡುತ್ತಾನೆ. ಅವರ ಧ್ಯಾನದಲ್ಲಿ ಆನಂದವಲ್ಲದೇ ಇನ್ನೇನು ಇರಲಿಲ್ಲ. ಇದೇ ಕೃಷ್ಣ ಪಂಥಿಯರ ಹಾಗೂ ಮಿಥ್ಯಕಥೆಗಳು ತಳಹದಿ. ಯಾವನು ಈ ಮಧುರ ಭಕ್ತಿಯ ಭಾವವನ್ನು ಅನುಭವಿಸುತ್ತಾನೋ ಅವನಿಗೆ ಸುಭರಾಯರ ರಾಧೆ-ಕೃಷ್ಣ ಗೋಪಿಯರು ರಾಸಲೀಲೆಗಳ ಮೇಲಣ ಚಿತ್ರಗಳ ದ್ವಾರವು ಸದಾ ತೆರೆದಿವೆ. ಶುಭರಾಯರು ೧೭೮೦ ರಿಂದ ೧೮೨೦ರ ವರೆಗೆ ಸೊಲ್ಲಾಪುರದಲ್ಲಿ ಈ ಚಿತ್ರಗಳನ್ನು ರಚಿಸುವ ಕಾಲದಲ್ಲಿ ಕಾಂಗ್ರಾ, ಬಾಸೋಲಿ, ಕಲಾಮುಕಾರಿ ಹಾಗೂ ರಾಜಾಸ್ಥಾನೀ ಕಲಾವಿದರೂ ಕೂಡಾ ಇದೇ ಕೃಷ್ಣನ ಅಖ್ಯಾಯಿಕೆಗಳನ್ನು ಚಿತ್ರಿಸಿ ಅನೇಕ ಕಲಾಕೃತಿಗಳನ್ನು ರಚಿಸಿದ್ದಾರೆ. ಶುಭರಾಯನು ಇದಕ್ಕೆ ಹೊರತಾಗಿಲ್ಲ ಎಂದು ಹೇಳಬಹುದು[೪]. ಶುಭರಾಯರ ಕಲಾಕೃತಿಗಳಲ್ಲಿ ಶಾಂತಭಾವಕ್ಕೆ ಶೇಷನ ಪವಡಿಸಿದ ವಿಷ್ಣುವಿನ ಚಿತ್ರ ದಾಶ್ಯಭಾವಕ್ಕೆ ನಾರದ ಹನುಮಂತ ಗರುಡರ ಚಿತ್ರ ಸೌಕ್ಯ ಭಾವಕ್ಕೆ ಕೃಷ್ಣನ ಬಾಲ್ಯದ ಗೋಪಾಲ ಗೆಳೆಯರು ನರ್ತಿಸುತ್ತಿರುವ ಗೋಪಿಯರು ಕೋಲಾಟ ವಾತ್ಸಲ್ಯ ಭಾವಕ್ಕೆ ಯಶೋಧೆ ಕೃಷ್ಣ ಹಾಗೂ ಯಶೋಧೆ ಕೃಷ್ಣನಿಗೆ ಬೆಣ್ಣೆಯನ್ನು ಕೊಡುತ್ತಿರುವುದು ಯಶೋಧೆ ಕೃಷ್ಣನಿಗೆ ದಂಡಿಸುವುದ ಮಾಧುರ್ಯ ಬಾವಕ್ಕೆ ರಾಧೆ ಮತ್ತು ಕೃಷ್ಣ ಹಾಲಿಂಗನಗೈಯುವುದು ಮಿಲನಗೈಯುವುದು ಮುಂತಾದವುಗಳನ್ನು ಹೆಸರಿಸಬಹುದಾಗಿದೆ.

ಇವರು ರಚಿಸುತ್ತಿದ್ದ ಕಲಾಕೃತಿಗಳು ಹೆಚ್ಚಾಗಿ ವಿಷ್ಣುವಿನ ದಶಾವತಾರ, ಹಾಗೂ ಕೃಷ್ಣನ ಲೀಲಿಗಳು, ಪೌರಾಣಿಕ, ರಾಮಾಯಣ, ಮಹಾಭಾರತ, ಕಥೆಯನಾಧರಿಸಿದ ಚಿತ್ರಗಳಾಗಿವೆ. ವಿಷಯ ಪೌರಾಣಿಕವಾದರೂ ಅವರೂ ಅಳವಡಿಸಿಕೊಂಡಿರುವ ಶೈಲಿ ಭಿನ್ನ ಅಂದು ಸಿದ್ಧವಾಗುತ್ತಿದ್ದ ಉತ್ತರ ಭಾರತದ ಶೈಲಿಗಳ ಪ್ರಭಾವ ಹಾಗೂ ಕರ್ನಾಟಕದ ಮೈಸೂರು, ತಂಜಾವೂರು ಶೈಲಿಯ ಪ್ರಭಾವವಿದೆ. ಕಲ್ಪಿಸಿದ ವಿಷಯಗಳನ್ನು ತಮ್ಮದೇ ಆದ ಶೈಲಿಹಾಗೂ ವರ್ಣಸಂಯೋಜನೆಯಲ್ಲಿ ಚಿತ್ರಗಳನ್ನು ನಿರ್ಮಿಸಿದ್ದಾರೆ ಉದಾಹರಣೆಗೆ "ಗೋಪಿಕಾ ವಸ್ತ್ರಾಪಹರಣ" ಇದುವರೆಗೂ ಎಷ್ಟೋ ಕಲಾವಿದರು ಈ ವಿಷಯದ ಚಿತ್ರಗಳನ್ನು ಬಿಡಿಸಿದ್ದಾರೆ. ಆದರೆ ಅವರೆಲ್ಲ ಬಿಡಿಸಿರುವುದು ಕೃಷ್ಣ ಸೀರೆಗಳೊಂದಿಗೆ ಮರದ ಮೇಲೇರಿದ್ದಾನೆ. ಗೋಪಿಕೆಯರು, ನಡುನೀರಲ್ಲಿ ನಿಂತು ಸೀರೆಗಳನ್ನು ಮರಳಿಸಲು ನಾಚಿಕೆಯಿಂದ ಬಿನ್ನವಿಸುತ್ತಾರೆ. ಆದರೆ ಶುಭರಾಯರು ಚಿತ್ರಿಸಿದ ಈ ಸಂದರ್ಭದ ಚಿತ್ರ ತದ್ವಿರುದ್ಧ ಗೋಪಿಕೆಯರು ಲಜ್ಜೆಯಿಂದ ಸೀರೆಗಳನ್ನು ಮರಳಿಸಲು ಕೇಳಿಕೊಂಡಿಲ್ಲ, ದಿಟ್ಟತನದಿಂದ ಸೀರೆಗಳೊಂದಿಗೆ ಅವನು ಕುಳಿತ ಮರವನ್ನೇ ಎರತೊಡಗಿದ್ದಾರೆ. ಹೀಗೆ ವಿಷಯ ಒಂದೇ ಆದರೂ ಅದನ್ನು ಚಿತ್ರಸುವ ರೀತಿ ಬೇರೆ ಇವರೊಬ್ಬ ಅಂದಿನ ವಿಶಿಷ್ಟ ಕಲಾವಿದ.[೫] ಈ ಎಲ್ಲ ವಿಚಾರಗಳ ಹಿನ್ನೆಲೆಯಲ್ಲಿ ಇವರ ಕಲಾಕೃತಿಯಲ್ಲಿ ಯಾವೂದೇ ಪ್ರದೇಶದ ಹಾಗೂ ರಾಜಮಹಾರಾಜರ ನಿರ್ದಿಷ್ಟವಾದ ಪ್ರಭಾವ ಮತ್ತು ಪ್ರೇರಣೆಯು ಕಂಡುಬರುವುದಿಲ್ಲ. ಅಂದಿನ ಕಾಲದಲ್ಲಿ ಭಾರತೀಯ

೪. ಅ.ಲ. ನರಸಿಂಹನ್ (ಸಂ) : ಸಂತಕಲಾವಿದ ಶುಭರಾಯರು ಪು. ೫೯-೬೦

೫. ಎನ್.ಶಿ.ದೇಸಾಯಿ : ಪ್ರಜಾಮತ ದೀಪಾವಳಿ ವಿಶೇಷ. ಪು. ೨೬೨ ನವಂಬರ್. ೧೦.೧೯೮೫.



ಚಿತ್ರಕಾರ ಅಂದು ರಾಜರ ಚಿತ್ರಗಳು, ಅರಮನೆಯ ಚಿತ್ರಗಳು, ಬೇಟೆಯ ದೃಶ್ಯ ಇಂಥವುಗಳನ್ನೇ ಚಿತ್ರಿಸುತ್ತಿದ್ದ ಆ ಕಾಲದಲ್ಲಿ ಶುಭರಾಯರನ್ನು ಸೂಕ್ಷ್ಮವಾಗಿ ಗಮನಿಸಿದರೆ ಇವರದು ಹೆಚ್ಚಾಗಿ ದೈವೀ ಆರಾಧನೆಯ ಹಿನ್ನಲೆಯಲ್ಲಿ ರಚಿಸಿದ ಚಿತ್ರಗಳಾಗಿವೆ.

ಶುಭರಾಯರು ಒಬ್ಬ ಮಹಾನ್ ಕಲಾವಿದನೆಂದು ಎಲ್ಲರಿಗೂ ಗೋತ್ತಿರಲಾರರು. ಕೆಲವರು ಸಂಗೀತ ಹಾಗೂ ನೃತ್ಯಗಳಿಂದ ಭಗವಂತನನ್ನು ಆರಾಧಿಸುವವರನ್ನು ಕೇಳಿದ್ದೇವೆ ಆದರೆ ಚಿತ್ರಗಳ ಮೂಲಕ ಆರಾಧಿಸುವವರನ್ನು ನೀವು ಕೇಳಿರಲಾರರಿ ಬಹುಶಃ ಸಂತ ತತ್ವಜ್ಞಾನಿ. ಶುಭರಾಯರೊಬ್ಬರೇ ಹಾಗೆ ಮಾಡಿದವರಲ್ಲಿ ಮೊದಲಿಗರೇನೊ? ಇವರು ಮೊದಲೂ ಮೈಸೂರು ಹುಲಿ ಟಿಪ್ಪು ಸುಲ್ತಾನನ ಬಳಿ ಉಪಪ್ರಧಾನ ಮಂತ್ರಿಯಾಗಿದ್ದವರು, ಶ್ರೀರಂಗಪಟ್ಟಣದ ಕೊನೆಯ ಯುದ್ದಕ್ಕೆ ಮೊದಲು ಟಿಪ್ಪು ಸುಲ್ತನನ ಬ್ರಿಟೀಷರೊಂದಿಗೆ[6] ಸಂಪರ್ಕವಿದ್ದರೂ ಇವರ ಕಲೆಯಲ್ಲಿ ಯಾವುದೇ ರೀತಿಯ ಅರಸರ ಆ ಪ್ರಭಾವ ಪ್ರೇರಣೆಯೂ ಕಂಡುಬಂದಿಲ್ಲ. ಆಸ್ಥನದ ಯಾವೊಂದು ಚಿತ್ರವೂ ಬಿಡಿಸಿಲ್ಲ ರಾಜಮಹಾರಾಜರ ಭಾವಚಿತ್ರಗಳು, ಅರಮನೆಯ ಚಿತ್ರಗಳನ್ನು ಬಿಡಿಸಲಿಲ್ಲ, ಹಾಗೆ ಇವರ ಮೇಲೆ ಅಲ್ಲಿ ನಡೆದ ಅಹಿತಕರ ಘಟನೆ ಅಂದರೆ ಕೈಯಿಗೆ ತುಪ್ಪ ಹಚ್ಚಿ ಎಳ್ಳಿನ ರಾಶಿಯಲ್ಲಿ ಕೈ ಅದ್ದಿ ತಗೆದು ನಂತರ ಕೈಯಿಗೆ ಹತ್ತಿದ ಎಳ್ಳಿನ ಸಂಖ್ಯೆಯಷ್ಟು ಬ್ರಾಹ್ಮಣರು ಮುಸ್ಲಿಂರಾಗಿ ಪರಿವರ್ತನೆಗೊಳ್ಳಬೇಕೆಂಬ ವಿಷಯ ತಿಳಿದ ಶುಭರಾಯರು ಆಸ್ಥನವನ್ನೇ ತ್ಯಜಿಸಿದರು. ಇಂತಹ ವಿಚಾರಗಳ ಕರಿತು ಕೂಡಾ ಚಿತ್ರರಚಿಸಿಲ್ಲ ಹಾಗಾದರೆ ಇವರು ತಮ್ಮ ಮನಸ್ಸಿನಲ್ಲಿ ಉಂಟಾದ ಭಾವನೆಗಳನ್ನು ಸರಳವಾಗಿ ತಮ್ಮದೇಯಾದ ವಿಶಿಷ್ಟ ಶೈಲಿಯಲ್ಲಿ ಬಿಡಿಸಿದ್ದಾರೆ. ಇವರ ಜೀವನದಲ್ಲಿ ಹಲವಾರು ಇಂತಹ ಘಟನೆಗಳು ನಡೆದರು ಯಾವೂದೇ ವಿಚಾರದಲ್ಲಿ ಭಾಗಿಯಾಗದೆ. ತಮ್ಮ ಇಷ್ಟದೇವರನ್ನು ಪೂಜಿಸುತ್ತಾ, ಸಂಗೀತಗಾರರಾಗಿ. ತತ್ವಜ್ಞಾನಿಯಾಗಿ. ಕಲಾವಿದನಾಗಿ. ರಾಜಕಾರಣಿಯಾಗಿ. ಕವಿಯಾಗಿ ರೂಪಿತಗೊಂಡಿದ್ದಾರೆ.

ಸಂತ ಶುಭರಾಯರ ಕಲಾಕೃತಿಯಲ್ಲಿ ಪ್ರಮಾಣಬದ್ದವಾದ ಚಿತ್ರಗಳಿವೆ. ಇವರು ರಚಿಸಿದ ಕಾಗದ ಮೇಲಿನ ಹಲವಾರು ಕಲಾಕೃತಿಗಳು ಮೊದಮೊದಲೂ ಜನಪದ ಶೈಲಿಯಲ್ಲಿಯೇ ರಚಿಸಿರಬಹುದು.ಎಂದು ಊಹಿಸಲಾಗಿದೆ.

ಯಾವುದೇ ಕಲಾವಿದನು ಸ್ವತಹ ಚಿತ್ರಿಸಿದ ಕಲಾಕೃತಿಯೂ ಅವನ ವಿಶಿಷ್ಟ ಶೈಲಿಯಲ್ಲಿ ಇರಬಹುದು ಆದರೆ ಅದರ ಹಿಂದೆ ಆ ದೃಶ್ಯದ ಕಲ್ಪನೆ ಬರುವುದು. ಅಥವಾ ಯಾವೂದೂ ಒಂದು ಘಟನೆ ನಡೆದು ಹೋದ ವಿಚಾರ ಮತ್ತೆ ಮನಸ್ಸಿನ ಮೇಲೆ ಭಾರಿಪರಿಣಾಮಕಾರಿಯಾಗಿ ಮತ್ತೆ ಕಲ್ಪಿಸುವಂತಹ ವಿಚಾರಗಳು ಕಲಾವಿದನ ವಿಚಾರ ಶಕ್ತಿಯಲ್ಲಿ ಮನೆಮಾಡಿಕೊಂಡಿರುತ್ತವೆ. ಹಂತಹ ಹಲವಾರು ವಿಚಾರಗಳ ಮಿಂಚಿ ಮಾಯಾವಾಗುವದರೊಳಗೆ. ಕಲಾವಿದ ತನ್ನ ಕಲ್ಪನೆಯ ಮೂಲಕ ಹಿಡಿದಿರುತ್ತಾನೆ. ಸಮಯ ಸಂದರ್ಭಕ್ಕೆ ಅನುಗುಣವಾಗಿ ಅವು ರೂಪತಾಳುತ್ತವೆ. ಹಾಗೆ ಸಂತ ಶುಭರಾಯರು ಸಹ ಮೊದಲಿನಿಂದಲೂ ಕಲೆಯಲ್ಲಿ ಆಸಕ್ತಿ ಇದ್ದರೂ ಆ ಕಲೆಯನ್ನು ತನ್ನ ಇಷ್ಟ ದೇವರಿಗೆ ಅರ್ಪಿಸುವುದರ ಮೂಲಕ ಕಾಲವನ್ನು

೬. ಎನ್. ೩ ದೇಸಾಯಿ. । ಸಂಯುಕ್ತ ಕರ್ನಾಟಕ. ಸಾಪ್ತಾಹಿಕ ಪುರವಣಿ. ಪುಟ. ೯ ದಿ. ೯-೯-೧೯೯೨



ಕಳೆದಿರಬೇಕು, ಈ ಕಲಾವಿದನ ಹಲವಾರು ಕಾಗದದ ಜಲವರ್ಣ ಕಲಾಕೃತಿಗಳು ಮಂಟಪಕ್ಕೆಂದು ರಚಿಸಿದ ಕೃತಿಗಳಾದ್ದರಿಂದ ಬಂದಂತಹ ಹಬ್ಬ ಉತ್ಸವಗಳಲ್ಲಿ ಈ ಕಲಾಕೃತಿಯನ್ನು ಮಂಟಪಕ್ಕೆ ಅಂಟಿಸಿ. ಮತ್ತೆ ಮುಂಬರುವ ಉತ್ಸವಕ್ಕೆ ಮತ್ತೊಂದು ಕಲಾಕೃತಿಯನ್ನು ನಿರ್ಮಿಸಿ ಮತ್ತೆ ಹಳೆಯದಾದ ಕಲಾಕೃತಿಯ ಮೇಲೆ ಹೊಸ ಕಲಾಕೃತಿಯನ್ನು ಅಂಟಿಸುವ ರೂಡಿಗೆ ಬಂದರೂ ಈ ಎಲ್ಲಾ ವಿಚಾರಗಳನ್ನು ಗಮನಿಸಿದಾಗ ಇಂತಹ ಹಲವಾರು ಕಲಾಕೃತಿಗಳು ಒಂದರಮೇಲೊಂದರಂತೆ ಅಂಟಿಸಿದಾಗ ಹಿಂದಿನ ಕಲಾಕೃತಿಗಳು ಇಂದೂ ದೊರಕಿದ ಕಲಾಕೃತಿಗಳಲ್ಲಿ ವ್ಯತ್ಯಾಸಗಳು ಕಂಡುಬಂದಿವೆ.

ಒಂದು ಕಲಾಕೃತಿಯನ್ನು ರಚಿಸುವ ಹಂತದಲ್ಲಿ ಕಲಾವಿದನ ಕಲ್ಪನೆಯೂ ಅಪಾರ ಕೊಡುಗೆಯೆಂದು ತಿಳಿಯುವದು ಸರಿ; ಆದರೆ ಈ ಕಲ್ಪನೆಯೊಂದಿಗೆ ದಿನ ನಿತ್ಯ ಕಾಣುವ ದೃಶ್ಯ ಘಟನೆ ಇವೆಲ್ಲವು ಜೀವನದಲ್ಲಿ ಹಾಸು ಹೋಕ್ಕಾಗಿರುತ್ತವೆ. ಸಂತ ಶುಭರಾಯರ ಕಾಲದಲ್ಲಿ ಹೆಚ್ಚು ಪೌರಾಣಿಕ ವಿಷಯಗಳಿಗೆ ಮಹತ್ವ ನೀಡಿ ಕೃತಿರಚಿಸಿದ್ದರೆ. ಆ ಪೌರಾಣಿಕ ಕಲ್ಪನೆಯನ್ನು ಒಡಮೂಡಿಸುವಾಗ ಹೊಳೆಯುವ ಹಲವಾರು ವಿಚಾರಗಳಲ್ಲಿ ಪ್ರಕೃತಿಯ ಪ್ರಭಾವ ಕಂಡುಬರುತ್ತದೆ. ಹಾಗೇ ಪ್ರಕೃತಿಯಲ್ಲಿಯ ಜೀವಿಗಳು ಸಂತ ಶುಭರಾಯರ ಮೇಲೆ ಪ್ರಭಾವಬೀರಿವೆ ಎನ್ನುವುದರಲ್ಲಿ ಸಂದೇಹವಿಲ್ಲ, ಇವರ ಕಲಾಕೃತಿಯಲ್ಲಿ ಗೋಪಿಕಾ ಸ್ತ್ರೀಯರ ರಾಸಲೀಲೆಯ ದೃಶ್ಯ ಜನಪದ ಶೈಲಿಗೆ ಹತ್ತಿರವಾಗಿದ್ದು ಕಂಡುಬರುತ್ತದೆ. ಕೊರಳಾಭರಣ, ಮೂಗಿನ ನತ್ತು ಸೀರೆ, ಕುಪ್ಪಸಗಳಲ್ಲಿ ಜಾನಪದೀಯ ಅಂಶಗಳು ಕಂಡುಬರುತ್ತವೆ.

ರಾಧಾ ಕೃಷ್ಣನ ಮೀಲನ ಕ್ರಿಯೆಯ ದೃಶ್ಯದಲ್ಲಿ ಮುಖ್ಯವಾಗಿ ಕಂಡುಬರುವ ಮಂಟಪಗಳು ಹಲವಾರು ಪ್ರಭಾವ ಮತ್ತು ಪ್ರೇರಣೆಗೆ ಒಳಗಾಗಿವೆ. ಇಲ್ಲಿ ಮಂಟಪದಮೇಲೊಂದು ಮಂಟಪ ಹಾಗೇ ಅದರ ಮೇಲೆ ಮುಸ್ಲಿಂ ಶೈಲಿಯ ಗೋಪುರ, ರೇಖಾವಿನ್ಯಾಸ, ಕಮಾನುಗಳು ರಚಿಸಿರುವುದನ್ನು ಗಮನಿಸಿದರೆ ಇಲ್ಲಿ ಅಂತಹ ಭಾವನೆ ಮೂಡುವುದು ಸಹಜವಾಗಿದೆ. ಅಂತೆಯೇ ಇವರ ಕಲಾ ಕೃತಿಯ ಕುರಿತು ಪಿ.ಆರ್. ತಿಪ್ಪೇಸ್ವಾಮಿಯವರು 'ಸಂತ ಕಲಾವಿದ ಶುಭರಾಯರು' ಎಂಬ ಪುಸ್ತಕದಲ್ಲಿ ಉಲ್ಲೇಖಿಸಿರುವ ಹಾಗೆ ಹಿಂದಿನ ಎಲ್ಲಾ ಚಿತ್ರಗಾರರಿಗೆ ಸ್ಫೂರ್ತಿ ನೀಡಿದ್ದು ಪೌರಾಣಿಕ ಪ್ರಸಂಗಗಳೇ, ರಾಮಾಯಣ, ಮಹಾಭಾರತ, ಕೃಷ್ಣಲೀಲೆಯ ಪ್ರಸಂಗಗಳು ಕಲಾವಿದರಿಗೆ ಸ್ಫೂರ್ತಿ ನೀಡಿವೆ. ಹಾಗೆಯೇ ಶುಭರಾಯರಿಗೆ ಸಹ ಈ ಅನ್ವಹಿಸುತ್ತದೆ. ವಿಶಿಷ್ಟ ಶೈಲಿ, ಆಗಿನ ಕಾಲದ ಯಾವುದೇ ಪ್ರಾದೇಶಿಕ ಕಲಾಶೈಲಿ ಅವರ ಮೇಲೆ ಪ್ರಭಾವ ಬೀರಿಲ್ಲ. ಅವರು ಮಠ ಬಿಟ್ಟು ಹೊರಗೆಲ್ಲೂ ಹೋಗದೆ ಇರುವುದೂ ಇದಕ್ಕೆ ಕಾರಣವಾಗಿದೆ ಎನ್ನಬಹುದು. ಇಂತಹ ಕೆಲವೊಂದು ವಿಚಾರಗಳನ್ನು ಸೂಕ್ಷ್ಮವಾಗಿ.ಅವಲೋಕಿಸಿದಾಗ ಒಂದು ವಿಚಾರ ಹೊಳೆಯುತ್ತದೆ. ಕಲಾವಿದ ಸಂತ ಶುಭರಾಯರ ಭಾವ ಚಿತ್ರರಚಿಸಿದ ಕಲಾವಿದ 'ಮಾಧವರಾವ ಲೀಲ' ಇವರು ಶುಭರಾಯರ ಸಮಕಾಲೀನ ಚಿತ್ರಗಾರರಾಗಿದ್ದುದಲ್ಲದೆ ಆಕಾಲದ ಸುಪ್ರಸಿದ್ಧ ಕಲಾಕಾರರಾಗಿದ್ದರು. ಪೇಶ್ವೆಯರ ಅರಮನೆಯ ಮುಖ್ಯಚಿತ್ರಗಾರನು ಆಗಿದ್ದುದು ಎಂದು ತಿಳಿಯುತ್ತದೆ. ಇವರು ರಚಿಸಿದ ಕಲಾಕೃತಿಯ ವಸ್ತ್ರವಿನ್ಯಾಸ ರೀತಿ ಶುಭರಾಯರು ರಚಿಸಿದ ವಸ್ತ್ರವಿನ್ಯಾಸವು ಸ್ವಲ್ಪ ಹತ್ತಿರ ವಿರುವುದರಿಂದ ಇವರ ಪ್ರಭಾವವು ಅವರ

---

೭ ಪಿ. ಆರ್. ತಿಪ್ಪೇಸ್ವಾಮಿ (ಪ್ರ.ಸಂ): ಸಂತ.ಕಲಾವಿದ ಶುಭರಾಯರು. ಪುಟ. ೨೪ ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು ೧೯೯೬

೮. ಎನ್.ಸಿ. ದೇಸಾಯಿ : ಉದಯವಾಣಿ ದೀಪಾವಳಿ ವಿಶೇಷಾಂಕ. ೧೯೮೪.



ಮೇಲೆ ಬಿದ್ದಿರಬಹುದು. ಎಂದು ಊಹಿಸಲಾಗಿದೆ. ಹಾಗೆ ಉದಯವಾಣಿಯ ದೀಪಾವಳಿ ವಿಶೇಷಾಂಕದಲ್ಲಿ ಎನ್.ಸಿ.ದೇಸಾಯಿಯವರ ಉಲ್ಲೇಖಿಸಿರುವಹಾಗೆ ಶುಭರಾಯರು ಚಿತ್ರಿಸಿದ ಶೈಲಿ ಉತ್ತರ ಭಾರತೀಯ ಜೈಪುರ ಶೈಲಿಗೆ ಹತ್ತಿರವಿದೆ ಎಂದೊಂದು ಮರಾಠಿ ಭಾಷೆಯಲ್ಲಿ ಬರೆದ ಚಿಕ್ಕ ಲೇಖನದಲ್ಲಿ ಹೇಳಿದ್ದನ್ನು ಉಲ್ಲೇಖಿಸುವುದರ ಜೊತೆಗೆ ಈ ಶೈಲಿಯನ್ನು ಅವರು ಒಪ್ಪಿಕೊಂಡಿಲ್ಲ, ಇವರು ಈತ್ತ ಕರ್ನಾಟಕ ಶೈಲಿ, ಪ್ರಭಾವ ಕಂಡು ಬರುವುದಿಲ್ಲ ಅತ್ತ ಮರಾಠ ಶೈಲಿಗೂ ಅನ್ವಯವಾಗಿಲ್ಲ ಎಂದು ತಿಳಿಸುತ್ತಾರೆ. ಆದರೆ ಈ ಎಲ್ಲಾ ಶೈಲಿಗಳ ಪ್ರಭಾವವು ಶುಭರಾಯರ ಮೇಲಾಗಿದೆ ಎನ್ನುವುದಕ್ಕೆ ಕಲಾಕೃತಿಗಳನ್ನು ಸೂಕ್ಷವಾಗಿ ನೋಡಿದಾಗ ಮಾತ್ರ ಗೊತ್ತಾಗುತ್ತದೆ.

ಶುಭರಾಯರ ಕಲಾಕೃತಿಯಲ್ಲಿ ರೇಖೆಗಳ ಸೃಜನಶೀಲ ಕ್ರಿಯ ನಮ್ಮ ಕಣ್ಣೆದುರು ತರುವುದು ನಮ್ಮ ಮನಸ್ಸು ರೂಪಿಸಿಕೊಂಡ ಪ್ರತಿಬಿಂಬವನ್ನು ಪರಿಚಿತ ವೆನಿಸುವಷ್ಟು ಆ ಆಕೃತಿಗಳು ಸ್ಪಷ್ಟ-ವಿವರಗಳನ್ನು ನಿಡುತ್ತವೆ. ಕಲಾವಿದನ ಆಂತರಿಕ ಒತ್ತಡ ಹೆಚ್ಚಾಗಿ ತನ್ನಲ್ಲಿ ಅಡಗಿರುವ ವಿಚಾರಗಳನ್ನು ಸ್ಪಷ್ಟವಾಗಿ ವೀಕ್ಷಕನ ಮುಂದೆ ತರುವುದು ಪರಿಚಿತವೆನಿಸುವ ಲಯ ಆ ಮೇಲಿನ ಎರಡನೆಯ ಘಟ್ಟದ ಮುಂದುವರಿದ ರೇಖಾ ವಿನ್ಯಾಸಗಳಲ್ಲಿ ಸೌಂದರ್ಯಾನುಭೂತಿಯ ಮೂಸೆಯಲ್ಲಿ ಪಕ್ವವಾಗಿ ಶಕ್ತಿ ಪಡೆದುಕೊಂಡು ರೇಖೆಗಳು ಅತ್ತ ಇತ್ತ ತವಳಿ ಹೊರಳಿ, ಪಕ್ಕನೆ ಪ್ರಜ್ವಲಿಸುವ ಬೆಂಕಿಯಂತೆ ಆಗಾಗ ಮಿಂಚಿ, ಏರಿಳಿತಗಳ, ವಕ್ರರೇಖೆಗಳು, ವರ್ತುಲಗಳ ಸಂಬಂಧದಲ್ಲೇ ಒಂದು ಆತ್ಮೀಯವೆನಿಸುವ ಲಯವನ್ನು ಪ್ರಕಟಿಸಿದ್ದದೆ. ಅದಕ್ಕೂ ಮುಂದುವರಿದ ರೇಖಾ ಶೈಲಿಯಲ್ಲಿ ಕಲಾವಿದನ ಮೂರನೆಯ ಕಣ್ಣು ತೆರೆದಂತೆ, ಇಲ್ಲಿ ರಸಾನುಭವದ ಉನ್ಮಾದದ ಬೆಳಕಿನಲ್ಲಿ ರೇಖೆಗಳು ಭಾವಸೂಚಕವಾದ ತಮ್ಮದೇ ವಿನ್ಯಾಸವನ್ನು ರೂಪಿಸಿಕೊಂಡು ನರ್ತಿಸುವಂತೆ, ಬೇಕೆನಿಸಿದಲ್ಲಿ ಪರಿಮಾಣವನ್ನು ಹಿಗ್ಗಿಸಿಕೊಂಡು ಬೇಡವಾದಲ್ಲಿ ಕಡಿದು, ಹೃದಯ ಬುದ್ಧಿಯ ಎಲ್ಲ ಸಂವೇದನೆಗಳನ್ನು ಅಗತ್ಯಕ್ಕೆ ತಕ್ಕಂತೆ ಪ್ರಕಟಿಸುತ್ತ ನರ್ತಿಸುತ್ತಲೇ ಎತ್ತಲೋ ಸಾಗುವಂತೆ ಕಾಣುವ ಸೌಂದರ್ಯಾನುಭೂತಿಗೆ ಕಾರಣವಾಗಿದೆ.[೯] ಎಂಬ ಮಾತುಗಳು ಅರ್ಥಪೂರ್ಣವಾಗಿವೆ. ಕಲಾವಿದ ಸಂತ ಶುಭರಾಯರ ಕಲಾಕೃತಿಯಲ್ಲಿ ನೇರವಾದ ರೇಖೆಗಳು, ವೃತ್ತಾಕಾರಗಳು, ವಕ್ರರೇಖೆಗಳು, ಅರ್ಧಚಂದ್ರಾಕಾರದ ರೇಖೆಗಳು ಮೂಡಿ ಬಂದಿವೆ. ಅಲ್ಲದೆ ಇವರ ಕಲಾಕೃತಿಯಲ್ಲಿ ಪ್ರಮುಖವಾಗಿ ಕಂಡುಬರುವ ಚುಕ್ಕಿಗಳನ್ನು ಹೆಚ್ಚಾಗಿ ಬಳಸಿರುವುದರಿಂದ ಇಂತಹ ಶೈಲಿ ಎಲ್ಲೂ ಕಂಡುಬರುವುದಿಲ್ಲ. ಇದು ಇವರದೆಯಾದ ವಿಶಿಷ್ಟ ಶೈಲಿಯನ್ನಿಸುತ್ತದೆ. ಹಾಗೆ ಕೇಲವು ಸ್ತ್ರೀಯರ ಸ್ತನಗಳನ್ನು ವೃತ್ತಾಕಾರವಾಗಿ ಚಿತ್ರಿಸಿದ್ದಲ್ಲದೇ ಮತ್ತೆ ಕೇಲವರಲ್ಲಿ ಒಂದೇ ಸ್ತನಗಳನ್ನು ಮೂಡಿಸಿದ್ದಾರೆ. ಅಲ್ಲದೆ ಹಾಗೆ ಬೇರೆ ಬೇರೆ ಕಲಾಕೃತಿಗಳನ್ನು ಗಮನಿಸಿದಾಗ ಕೇಲವು ಕಲಾಕೃತಿಯಲ್ಲಿ ಅಂಕುಡೊಂಕು ರೇಖೆಗಳು ಸಹ ಕಂಡುಬರುತ್ತವೆ. ಹಿಂಭಾಗದಲ್ಲಿ ನಕ್ಷಾವಿನ್ಯಾಸಗಳು ವಸ್ತುವಿಷಯಕ್ಕೆ ಅನುಗುಣವಾಗಿ ಮೂಡಿಬಂದು. ಇವರದೆ ಆದ ಪ್ರತ್ಯೇಕ ಶೈಲಿಯಲ್ಲಿ ಮರದ ಟೊಂಗೆಯನ್ನು ಹೆಚ್ಚಾಗಿ ಬಳಸಿದ್ದಾರೆ. ಈ ಟೊಂಗೆಯ ತುದಿಯಂಚಿನಲ್ಲಿ ಮಾತ್ರ ಹಣ್ಣುಗಳು ರಚನೆಯಾಗಿವೆ. ಈ ಎಲ್ಲ ಚಿತ್ರಗಳ ಹಿಂದಿನ ಪ್ರಭಾವ ಪ್ರೇರಣೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ. ಸಾಂಪ್ರದಾಯಿಕ ಶೈಲಿಯೇ ಎನ್ನಿಸುತ್ತದೆ.

೯. ವ್ಯಾಸರಾಯ ಬಲ್ಲಾಳ | ಕಲಾವಿದ ಹೆಬ್ಬಾರರ ರೇಖಾಲಾವಣ್ಯ, ಪುಟ ೫೬, ನವಕರ್ನಾಟಕ ಪಬ್ಲಿಕೇಷನ್ಸ್ ಬೆಂಗಳೂರು, ೧೯೯೯.



ಕಲಾವಿದ ಹೆಬ್ಬಾರರ ರೇಖಾ ಲಾವಣ್ಯದಲ್ಲಿ ಉಲ್ಲೇಖಿಸಿರುವ ಹಾಗೆ ಮೊದಲೂ ಹೆಬ್ಬಾರರು ಮದುವೆಯಾದದ್ದು ಕಲೆಯನ್ನೇ ನಂತರ ಮಡದಿಯಂತೆ.[೧೦] ಹಾಗೇ ಶುಭರಾಯರನ್ನು ಗಮನಿಸಿದಾಗ ಇವರು ಮೊದಲು ತಮ್ಮ ಇಷ್ಟ ದೇವರನ್ನು ಆರಾದಿಸಿದರು ನಂತರ ಇವರ ಸಾವಿರಾರು ಕಲಾಕೃತಿಗಳು ಮಂಟಪಕ್ಕೆಂದೇ ನಿರ್ಮಾಣವಾಗಿವೆ ಹೊರತು ಚಿತ್ರಕಲಾಕೃತಿ ರಚನೆಗಾಗಿ ಅಲ್ಲ. ಇವರು ಮೊದಲೂ ರಚಿಸಿದ ಕಲಾಕೃತಿಗಳು ಹಾಳಾದ ಕಾರಣ ದೊರಕದೆ ಇರುವುದರಿಂದ ಆ ಕಲಾಕೃತಿಗಳ ತಂತ್ರ ಶೈಲಿ ಪ್ರಭಾವ ಮತ್ತು ಪ್ರೇರಣೆ ಕುರಿತು ಹೇಳುವುದು ಕಷ್ಟಸಾಧ್ಯವಾಗಿದೆ. ಸಧ್ಯ ದೊರಕಿದಂತಹ ಕಲಾಕೃತಿಯನ್ನು ಗಮನಿಸಿ ಮಾತ್ರ ಚರ್ಚಿಸಲಾಗಿದೆ.

ಆಕಾರ ವರ್ಣಗಳಲ್ಲಿ ಗತಿಯನ್ನು ಜೀವಂತಿಕೆಯನ್ನು ತರುವ ರೀತಿಯನ್ನು ನಾವು ಪಶ್ಚಿಮದಿಂದ ಕಲಿಯಬೇಕಾಯಿತು. ನಿಂತ ನೀರಿನಂತಿದ್ದ ವಿಚಾರಗಳಿಂದ ಹೊರಬಿದ್ದದ್ದು. ಅವರಿಂದಲೇ ಎಂದರೆ ತಪ್ಪಾಗಲಾರದು. ಭಾರತೀಯ ಚಿತ್ರಕಲೆಯ ಸ್ವರೂಪವನ್ನು ಪರಿಚಯಿಸಿದ ಆನಂದ ಕುಮಾರ ಸ್ವಾಮಿಯವರು ಹೇಳುವಂತೆ ನಮ್ಮ ಚಿತ್ರಕಲೆ ಉಪೇಕ್ಷೆಗೆ ಗುರಿಯಾಗಿತ್ತು ನನಗಿನ್ನೂ ನೆನಪಿದೆ ಭಾರತೀಯ ಚಿತ್ರಕಲೆಯೆಂದರೆ ಹೆಂಗಳೆಯರ ರಂಗೋಲಿ ಎಂದು ಮೂದಲಿಕೆಯ ಮಾತನ್ನಾಡಿದ್ದು ನೆನಪಿದೆ ಎನ್ನುತ್ತಾರೆ.[೧೧] ಈ ಮಾತುನ್ನು ಗಮನಿಸಬೇಕು. ಮೊದಮೊದಲೂ ಚಿತ್ರಕಲಾವಿದರೂ ಇತರೆ ದೇಶಗಳ ಪ್ರಭಾವ ಪ್ರೇರಣೆಗೆ ಒಳಗಾದರೂ ನಂತರದ ದಿನಗಳಲ್ಲಿ ಈ ಚಿತ್ರಕಲಾವಿದರೂ ತಮ್ಮದೆಯಾದ ಪ್ರತ್ಯೇಕ ಶೈಲಿಯನ್ನು ಕಂಡುಕೊಳ್ಳಲು ಪ್ರಯತ್ನಿಸಿದರು. ಇದಕ್ಕೆ ಹಲವಾರು ಶತಮಾನಗಳು ಕಳೆದಿರಬಹುದು. ನಂತರ ತಮ್ಮದೇಯಾದ ಭಾರತೀಯ ಸಾಂಪ್ರದಾಯಿಕ ಹಿನ್ನಲೆಯಲ್ಲಿ, ಕಲಾಕೃತಿಯನ್ನು ರಚಿಸಿರುವುದನ್ನು ಕಾಣುತ್ತೇವೆ ಇಂತಹ ಹಲವಾರು ವಿಚಾರಗಳು ಉದ್ಭವಿಸುವ ಹಂತದಲ್ಲಿ ಅನೇಕ ಕಲಾವಿದರು ತಮ್ಮ ತಮ್ಮದೆಯಾದ ಪ್ರತ್ಯೇಕ ಶೈಲಿಯೊಂದಿಗೆ ಗುರುತಿಸಿ. ಕೊಂಡಿದ್ದಾರೆ. ಸಂತ ಶುಭರಾಯರು ಸಹ ತಮ್ಮದೇಯಾದ ಚಾಪನ್ನು ಮೂಡಿಸುವುದರೊಂದಿಗೆ ಕಲಾಜಗತ್ತಿಗೆ ವಿಶೇಷವಾದ ಕೊಡುಗೆ ನೀಡಿದ್ದಾರೆ.

ಚಿತ್ರಕಲೆಯಲ್ಲಿ ಇಂದು ನಾವು 'ಎಕ್ಸ್‌ಪ್ರೆಶನ್' ಎಂದು ಕರೆಯುವ ತಂತ್ರ ಶುಭರಾಯರ ಕಾಲದಲ್ಲಿಯೇ ಪ್ರಸಿದ್ಧಿಗೆ ಬಂದಿತ್ತು. ಗೋಪಿಕಾ ವಸ್ತ್ರಾಪಹರಣ ತಂತ್ರದಲ್ಲಿ ಇವನ್ನು ಕಾಣಬಹುದು. ಶ್ರೀಕೃಷ್ಣ ಗೋಪಿಕಾ ಸ್ತ್ರೀಯರ ಸೀರೆಗಳನ್ನು ತೆಗೆದುಕೊಂಡು ಮರವೇರಿದಾಗ ಅವನ್ನು ಮರಳಿ ಕಸಿದುಕೊಳ್ಳಲು ಅವರು ಏನು ಈ ಕುಚೋದ್ಯ ಎಂದು ಹೇಳಿ ಸೀರೆಯನ್ನು ಮರಳಿಸಲು ಕೇಳಿಕೊಂಡಿದ್ದಾರೆ. ಹಗಲು-ರಾತ್ರಿಗಳನ್ನು ತೋರುವ ವರ್ಣ ವೈವಿಧ್ಯವೂ ಚಿತ್ರಗಳಲ್ಲಿ ಅಗಾಧವಾಗಿದೆ. ಮಾನವರ. ಪಶು-ಪಕ್ಷಿಗಳ ದೈಹಿಕ ಚಲನವಲನವನ್ನು ತೋರಿಸುವಲ್ಲಿಯೂ ಅವರ ಜಾಣ್ಮೆ ಹಿರಿದು ಕೃಷ್ಣ. ರಾಧೆ. ಗೋಪಿಕೆಯರ ನೃತ್ಯದ ಚಿತ್ರದಲ್ಲಿ ಇದನ್ನು ಕಾಣಬಹುದು. ಕೋಲಾಟದ ಮಹಿಳೆಯರು. ಹಾಲುಮಾರುವ ಗೌಳಿಗರು ಮುಂತಾದ ಅಲಂಕಾರಿಕ ಚಿತ್ರಗಳಲ್ಲಿ ವರ್ಣ ವೈವಿಧ್ಯ ಗಮನಾರ್ಹ. 'ಭಕ್ತಿ' ಅವರ ಎಲ್ಲ ಚಿತ್ರಗಳಲ್ಲಿ ಅಂತರ್ವಾಹಿನಿಯಾಗಿ ಹರಿದಿರುವ ಭಾವವಾಗಿದೆ.

೧೦. ವ್ಯಾಸರಾಯ ಬಲ್ಲಾಳ: ಕಲಾವಿದ ಹೆಬ್ಬಾರರ ರೇಖಾಲಾವಣ್ಯ. ಪುಟ ೩೨.

೧೧. ವ್ಯಾಸರಾಯ ಬಲ್ಲಾಳ: ಕಲಾವಿದ ಹೆಬ್ಬಾರರ ರೇಖಾಲಾವಣ್ಯ. ಪುಟ ೨೩.



ಶುಭರಾಯರ ಇಲ್ಲಿ ಅಧ್ಯಯನಕ್ಕೆ ಒಳಪಡಿಸಿದ ಒಟ್ಟು ೭೫ ಕಲಾಕೃತಿಗಳನ್ನು ಆಯ್ಕೆಮಾಡಲಾಗಿದೆ. ೭೫ ಕಲಾಕೃತಿಗಳಲ್ಲಿ ೬೦ ಕೃಷ್ಣನ ಪೌರಾಣಿಕ ಕಥೆಯ ಮೇಲೆ ೭, ದಶಾವತಾರದ ಮೇಲೆ ೬ ರಾಮಾಯಣ ಹಾಗೂ ೨ ಭಗವಾನ್ ವಿಷ್ಣುವಿನ ಮೇಲಿವೆ. ಕೃಷ್ಣನ ಪೌರಾಣಿಕ ಕಥೆಗಳು ಬೃಹತ್ತಾಗಿವೆ. ಇವುಗಳಲ್ಲಿ ಬಹಳಷ್ಟು ಸನ್ನಿವೇಶಗಳು ವ್ಯಕ್ತಿಗಳು ತುಂಬಿದ್ದಾರೆ. ಶ್ರೀಕೃಷ್ಣನು ತನ್ನ ಜೀವನದಲ್ಲಿ ಬಹಳಷ್ಟು ಭೂಮಿಕೆಗಳನ್ನು ವಹಿಸಿದ್ದನು. ಹಾಗೂ ಅವನ ಜೀವನದ ಪ್ರತಿಹಂತವೂ ಒಂದು ವಿಶೇಷಕಾರ್ಯ ಹಾಗೂ ಧ್ಯೇಯಕೋಸ್ಕರ ಮಾಗಿಸಲ್ಪಟ್ಟಿದೆ. ಶುಭರಾಯರು ಶ್ರೀಕೃಷ್ಣನ ಜೀವನದ ಎರಡು ಹಂತಗಳನ್ನು ಮಾತ್ರ ಇಲ್ಲಿ ನಿರೂಪಿಸಿದ್ದಾರೆ. ಅವೆಂದರೆ ಕೃಷ್ಣಲೀಲೆಯಲ್ಲಿ ತೋರುವ ಕೃಷ್ಣನು ಬಾಲ್ಯಾವಸ್ಥೆ ಹಾಗೂ ಶ್ರೀಕೃಷ್ಣ, ರಾಧಾ. ಗೋಪಿಕೆಯರ ದೈವಿಪ್ರೇಮಬಂಧನ ಮತ್ತು ರಾಸಲೀಲೆ ನೃತ್ಯಗಳು ಸಂಗ್ರಹಿಕಾರದಲ್ಲಿ ೪೦ ಚಿತ್ರಗಳು ರಾಧಾ–ಗೋಪಿಕೆ, ರಾಸಲೀಲೆ ಇವುಗಳ ಮೇಲೆ ಆಗೂ ೨೦ ಚಿತ್ರಗಳು ಕೃಷ್ಣಲೀಲೆಯ ಮೇಲಿವೆ. ರಾಧಾಕೃಷ್ಣರ ವಿಷಯದಲ್ಲಿ ಶುಭರಾಯರ ಶ್ರೇಷ್ಠತೆ ಕಂಡುಬರುತ್ತದೆ.

ಮನುಷ್ಯನ ಆಕೃತಿ ಹಾಗೂ ಮುಖಗಳನ್ನು ಚಿತ್ರಿಕರಿಸುವಾಗ ಕಲಾವಿದ ಶುಭರಾಯರು ಪಾರ್ಶ್ವಚಿತ್ರಗಳ ಮೂಲಕ ಚಿತ್ರಿಸಿದ್ದಾರೆ. ಮುಖವನ್ನು ಪಾರ್ಶ್ವದಿಂದ ಕಾಣುವಂತೆ ವಿಶ್ಲೇಷಣೆಮಾಡಿ ನೋಡುವಾಗ ಒಟ್ಟು ಬರೆದ ೨೫೭ ಚಿತ್ರಗಳಲ್ಲಿ ಆರರಲ್ಲಿ ಮಾತ್ರ ಮುಖದ ಭಂಗಿಯು ಮುಂದಿನಿಂದ ಇವೆ. ಉಳಿದ ೨೫೧ ಚಿತ್ರಗಳು ಪಾರ್ಶ್ವ ಬದಿಯ ಚಿತ್ರಗಳು. ೪೦ ಚಿತ್ರಗಳು ಸಮಸ್ಥರ ವಿನ್ಯಾಸ ಹಾಗೂ ೩೪ ಚಿತ್ರಗಳು ಊರ್ಧ್ವ ವಿನ್ಯಾಸದಲ್ಲಿವೆ. ೭೪ ಕಲಾಕೃತಿಗಳಲ್ಲಿ ೨೨ ರಲ್ಲಿ ಹಿನ್ನಲೆಯನ್ನು ಕೂಡಾ ಶ್ರೇಷ್ಠಬಣ್ಣ ಹಾಗೂ ಆಕೃತಿಗಳಿಂದ ಚಿತ್ರಣಮಾಡಲಾಗಿದೆ.

ಕಲಾವಿದ ಶುಭರಾಯರು ಗೋವುಗಳನ್ನು ಚಿತ್ರಿಸುವುದರಲ್ಲಿ ನಿಪುಣರು ಕೃಷ್ಣನ ಕೊಳಲಿನ ಶಬ್ದದಿಂದ ಮುಗ್ಧರಾದ ಗೋವುಗಳು ೮ ಚಿತ್ರಗಳಲ್ಲಿವೆ. ಹೆಚ್ಚಿನ ಚಿತ್ರಗಳಲ್ಲಿ ಹಿನ್ನಲೆಯು ಕಾಲಿಯಾಗಿಲ್ಲ. ಅದರಲ್ಲಿ ಹೂಗಳ ಆಕಾರಕೃತಿಗಳು ಹಾಗೂ ವಾಸ್ತುಕಲಾ ಪ್ರತಿರೂಪಗಳು ಇವುಗಳಿಂದ ತುಂಬಿಸಲಾಗಿದೆ. ರಾಧೆ ಹಾಗೂ ಗೋಪಿಕೆಯರು ಪ್ರತಿಕ್ಷಣವೂ ನೃತ್ಯದ ಭಂಗಿಯಲ್ಲಿಯೇ ಇದ್ದಾರೆ. ಅವರು ಸ್ವರ್ಗದ ಲಯಕ್ಕೆ ಬದ್ಧರಾಗಿ ನೃತ್ಯಮಾಡುವ ಹಾಗೆ ನಮಗೆ ಭಾಸವಾಗುತ್ತದೆ. ಕಲಂ ಕಾರಿ ಕಲಾವಿದರಂತೆ ಹಾಗೂ ಜಾನಪದ ಚಿತ್ರಕಲಾವಿದರಂತೆ ಕಲಾವಿದ ಶುಭರಾಯರು ರೇಖೆಗಳನ್ನು ಎಳೆಯುವುದರಲ್ಲಿ ನಿಪುಣರು. ಅವರ ರೇಖೆಗಳು ಭಾವಗೀತೆಗಳನ್ನು ಹಾಡುವಂತೆಯೂ ನೃತ್ಯವನ್ನು ಮಾಡುವಂತೆಯೂ ತೋರುತ್ತವೆ.

ಕಲಾವಿದನ ರಚನಾ ಪ್ರಾವಿಣ್ಯ ಅಡ್ಡ ಅಗಲವಾದ ಲಂಬಾಕಾರದ ಮೂಲೆಯಾಕಾರದ ಪ್ರತಿಯೊಂದು ಅಂಕಣಗಳಲ್ಲೂ ಎದ್ದು ಕಾಣುತ್ತದೆ ಆಕೃತಿಗಳ ಸ್ಥಳ ನಿರ್ದೇಶನ ಸ್ವಲ್ಪ ಸರಳೀಕೃತವಾಯಿತೇನೋ ಎನಿಸಿದರೂ ದೃಶ್ಯಗಳ ಸಮತೋಲನ ಸಾಮರಸ್ಯಗಳನ್ನು ಕಲಾವಿದ ಅದ್ಭುತವಾಗಿ ಸಾಧಿಸಿದ್ದಾನೆ. ಚಿತ್ರಕಲೆಯಲ್ಲಿ ನಿಜಕ್ಕೂ ಇದೇ ಬಹುಮುಖ್ಯವಾದ ಅಂಶ. ಆಕೃತಿಗಳು ನಡುವೆ ಸಾಕಷ್ಟು ಸ್ಥಳಾವಕಾಶವಿರುವಂತೆ ಚಿತ್ರದ ತೆರವನ್ನು ಸಂಯೋಜಿಸಲಾಗಿದೆ. ಒಂದೇ ಆಕೃತಿ ಮತ್ತೆ ಮತ್ತೆ ಬರುವಂತ ಚಿತ್ರಕಲೆಗಳಲ್ಲಿ ಅದರ ಸುಂದರ ಗಂಭೀರ ನಿಲುವಿನಲ್ಲಿ ಚಲನಶೀಲತೆಯನ್ನು ಸಾಧಿಸಲಾಗಿದೆ. ಪ್ರತಿಯೊಂದು ಅಂಕಣಗಳನ್ನು ಪ್ರತ್ಯೇಕವಾಗಿ ವೀಕ್ಷಿಸುವಾಗ



ಅದು ತನ್ನಷ್ಟಕ್ಕೆ ತಾನೇ ಸ್ವಯಂಪೂರ್ಣವಾದ ಕಲಾಕೃತಿ ಚಿತ್ರವೆಂದು ಕಂಡುಬರುತ್ತದೆ. ಹೀಗಿದ್ದು ಕೃಷ್ಣನ ಜೀವನವನ್ನು ನಿರೂಪಿಸುವ ವಿಶಿಷ್ಟ ಶೈಲಿಯಲ್ಲಿ ರಚಿತವಾದ ಮತ್ತು ವರ್ಣರಂಜಿತವಾದ ಚಿತ್ರಗಳನ್ನುಳ್ಳ ಅನೇಕ ಅಂಕಣಗಳು ಸಂಯೋಜಿತ ಕಲಾಕೃತಿಯಾದ ಇಡೀ ಮಂಟಪವನ್ನು ಒಮ್ಮೆಗೆ ವೀಕ್ಷಿಸಿದಾಗ ಉಂಟಾಗುವ ಕಲಾನುಭವ ಅಪೂರ್ವವಾದುದು.

ಒಟ್ಟಾರೆ ಶುಭರಾಯರ ಕಲಾಕೃತಿಗಳೆಲ್ಲವನ್ನೂ ಸಮಗ್ರವಾಗಿ ಅಧ್ಯಯನಮಾಡುವ ಅವಶ್ಯಕತೆ ಇದೆ. ಈಗ ಅವರ ೭೫ ಉತ್ತಮ ಕಲಾಕೃತಿಗಳನ್ನು ಮಾತ್ರ ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇನ್ನೂ ಹಲವಾರು ಕಲಾಕೃತಿಗಳು ಒಂದೇ ವಿಷಯಕ್ಕೆ ಸಂಬಂಧಿಸಿದಂತೆ ಪುನರಾವರ್ತನೆಯಾಗಿವೆ. ಹೀಗಿದ್ದು ವರ್ಣಗಳ ಮತ್ತು ಸಂಯೋಜನೆಯ ವಿನ್ಯಾಸದ ಅನೇಕ ಹೊಸತನವನ್ನು ಸೂಕ್ಷ್ಮವಾಗಿ ನೋಡಿದಾಗ ಗೊತ್ತಾಗುತ್ತದೆ. ಇದೊಂದು ಕಾಲಬದ್ಧವಾದ ಅಧ್ಯಯನವಾಗಿದ್ದು ನಿಯಮಿತ ಅವಧಿಯಲ್ಲಿ ಈ ಅಧ್ಯಯನ ನಡೆದಿದೆ. ಮುಂದೆ ಅಧ್ಯಯನ ಮಾಡುವವರಿಗೆ ಇದೊಂದು ಪ್ರಾಥಮಿಕ ಅಧ್ಯಯನವಾಗಿದೆ ಎಂದು ಹೇಳಬಯಸುತ್ತೇನೆ.

* * *



ಅಧ್ಯಾಯ : ಆರು

# ಸಂತ ಶುಭರಾಯರ ಕಲಾಕೃತಿಗಳ ಪ್ರಸ್ತುತ ಸ್ಥಿತಿಗತಿ

ಪತ್ರಿಕೆಯಲ್ಲಿನ ಯಾವ ವಸ್ತುಗಳು ಶಾಶ್ವತವಲ್ಲ ಅವು ಒಂದಲ್ಲಾ ಒಂದು ಯಾವುದೇ ಒಂದು ಕಾರಣದಿಂದ ನಾಶವಾಗಿ ಹೋಗುತ್ತವೆ. ಹಾಗೇಯೆ ಶ್ರೀ ಸಂತ ಶುಭರಾಯರು ಸುಮಾರು ಎರೆಡು ಶತಮಾನಗಳ ಹಿಂದೆಯೇ ರಚಿಸಿದ ಪ್ರಸ್ತುತ ಪಾಟಚಿತ್ರಗಳು ಇದರ ಹೊರತಾಗಿಲ್ಲ. ಆದಕಾರಣ ಇಂದಿನ ವೈಜ್ಞಾನಿಕ ಯುಗದಲ್ಲಿ ಅವರು ರಚಿಸಿದಂತಹ ನೂರಾರು ವರ್ಣಚಿತ್ರ ಕಲಾಕೃತಿಗಳನ್ನು ವಿವಿಧ ಮಾರ್ಗೋಪಾಯಗಳ ಮೂಲಕ ಸೂಕ್ತವಾ ಕ್ರಮಗಳನ್ನಾಧರಿಸಿ ಆದಷ್ಟು ಹೆಚ್ಚು ದಿನಗಳ ಕಾಲ ಇಂತಹ ಪ್ರಾಚೀನ ಕಲಾವಿದರ ಕೊಡುಗೆ ಹಾಗೂ ಅವರು ರಚಿಸಿದ ಚಿತ್ರಕಲಾ ಸಂಪತ್ತನ್ನು ಕಾಯ್ದು ಅಜರಾಮರವಾಗಿ ಉಳಿಸಿಕೊಳ್ಳಬಹುದು.

ಶ್ರೀ ಶುಭರಾಯ ಮಹಾರಾಜರು ಚಿತ್ರಕಲಾ ಕೃತಿಗಳು ಸುಮಾರು ಹದಿನೇಳನೆ ಶತಮಾನದ ಉತ್ತರಾರ್ದದಲ್ಲಿ ರಚಿಸಲಾಗಿದ್ದು, ಸತತ ೨ಕ್ಕೂ ಹೆಚ್ಚು ಶತಮಾನಗಳು ಗತಿಸಿದರು. ಸಹ ಈಗಲೂ ಸಲ್ಪ ತಕ್ಕಮಟ್ಟಗೆ ಉತ್ತಮ ಸ್ಥಿತಿಯಲ್ಲಿವೆಯಲ್ಲಾದರೂ ಹಲವಾರು ಕಾರಣಗಳಿಂದ ನಿಧಾನಗತಿಯಲ್ಲಿ ಅವನತಿಯತ್ತ ಇದನ್ನು ತಪ್ಪಿಸಲು ಇಂದಿನ ಆಧುನಿಕ ಯುಗದಲ್ಲಿ ಕಲಾವಿದರೂ ಕಲಾಸಕ್ತರು, ಕಲಾಭಿಮಾನಿಗಳು, ಸಂಶೋಧಕರು ನಮ್ಮ ರಾಷ್ಟ್ರನಾಡಿನ ಸಾಂಸ್ಕೃತಿಕ, ಧಾರ್ಮಿಕ ಆಸ್ತಿಯಾಗಿರುವ ಇಂತಹ ಪ್ರಾಚೀನ ವರ್ಣಚಿತ್ರಗಳನ್ನು ಬಳಸಿಕೊಂಡು ಹೋಗುವುದು ನಮ್ಮ ಇಂದಿನ ಯು ಜನಾಂಗದ ಮೂಲ ಕರ್ತವ್ಯವಾಗಿದೆ.

ಶ್ರೀ ಶುಭರಾಯರು ರಚಿಸಿದ ವರ್ಣಚಿತ್ರಗಳ ಸ್ಥಿತಿ-ಗತಿ, ಅಪತ್ತು ಮತ್ತು ಅವುಳ ಸಂರಕ್ಷಣೆಯು ಮಾರ್ಗೋಪಾಯಗಳನ್ನು ಕುರಿತು ವ್ಯವಸ್ಥಿತವಾಗಿ ವಿಂಗಡಿಸಿ ಹೇಳುವುದು ಅಗತ್ಯವಾಗಿದೆ. ಈ ಹಿಂದೆ ಪ್ರಾಚೀನ ಕಲೆ, ಕಲಾಕೃತಿಗಳ ಅಧ್ಯಯನ ಕೈಗೊಂಡ ಸಂಶೋಧಕರು ತಮ್ಮ ಸಂಶೋಧನಾ ಅಧ್ಯಯನದಲ್ಲಿ ಕಲಾಕೃತಿಗಳ ಇಂದಿನ ಸ್ಥಿತಿಗತಿ ಸಂರಕ್ಷಣಾ ಕ್ರಮಗಳನ್ನು ಕುರಿತು ವ್ಯವಸ್ಥಿತವಾದ ಅಧ್ಯಯನ ಮಾಡಿದುದರ



ಕುರಿತು ತಿಳಿದು ಬರುತ್ತದೆ. ಹೀಗೆ ಅಧ್ಯಯನ ಕೈಗೊಂಡ ಅಧ್ಯಯನ ಕೆಲವು ಪ್ರಮುಖ ಅಂಶಗಳನ್ನು ಪ್ರಸ್ತುತ ಈ ನನ್ನ ಈ ಸಂಶೋಧನಾ ಅಧ್ಯಯನಕ್ಕೆ ಕೆಲವೊಂದು ವಿಷಯ ಮಾಹಿತಿಯ ಅವಶ್ಯಕತೆಯಿರುವದರಿಂದ ವಿವಿಧ ಆಕರಗಳ ಮಾದರಿಯಲ್ಲಿ ಸ್ಥಿತಿಗತಿಗಳ ಕುರಿತು ಅಧ್ಯಯನ ಕೈಗೊಂಡು. ಈ ಕೆಳಗೆ ವಿವರಿಸಲಾಗಿದೆ.

ಕ್ರಿ.ಶ. ೧೭೫೦ ರಿಂದ ೧೮೨೦ರ ವರೆಗೆ ಶುಭರಾಯರು ರಚಿಸಿದ ಚಿತ್ರ ಕಲಾಕೃತಿಗಳನ್ನು ಮಹರಾಷ್ಟ್ರದ ಸೊಲ್ಲಾಪುರದಲ್ಲಿ ಮಹಾರಾಷ್ಟ್ರ ಸರ್ಕಾರವು ಶುಭರಾಯರ ಹೆಸರಿನಲ್ಲಿ 'ಶುಭರಾಯ ಆರ್ಟಗ್ಯಾಲರಿ' ಸ್ಥಾಪಿಸಿದ್ದು ಅಲ್ಲಿ ಕೆಲವು ಕಲಾಕೃತಿಗಳನ್ನು ಕಾಣಬಹುದು. ಅಲ್ಲಿನ ಕಲಾಕೃತಿಗಳ ಸದ್ಯ ಉಚ್ಚಾಯ ಸ್ಥಿತಿಯಲ್ಲಿದ್ದು ಸುಮಾರು ೨೦೦ ಕ್ಕೂ ಹೆಚ್ಚು ವರ್ಷಗಳ ಹಿಂದೆ ರಚಿತಗೊಂಡಿರುವದರಿಂದ ಸ್ವಾಭಾವಿಕ ಮತ್ತು ಪ್ರಾಕೃತಿಕ ಕಾಲಮಾನಕ್ಕನುಸಾರವಾಗಿ ಚಿತ್ರರಚನೆಗೆ ಬಳಸಿದ ಕಾಗದಗಳು ಸತ್ವವನ್ನು ಕಳೆದುಕೊಂಡು ಅಲ್ಲಲ್ಲಿ ಹರಿದು ಹೋಗುತ್ತಿವೆ ಅಲ್ಲದೆ ಈಗಿನ ಹಾಗೆ ರಾಸಾಯನಿಕ ವರ್ಣಗಳು ಲಭ್ಯವಿಲ್ಲದ ಕಾರಣ ಅಂದು ಪ್ರಕೃತಿದತ್ತ ಗಿಡಮೂಲಿಕೆಗಳಿಂದ ಬಣ್ಣಗಳನ್ನು ತಗೆದು ಚಿತ್ರರಚಿಸಿದ್ದು ಕಾಲಾಂತರದಿಂದ ವರ್ಣಗಳೂ ಸಹ ಸತ್ವವನ್ನು ಕಳೆದುಕೊಂಡು ಚಿತ್ರಗಳಲ್ಲಿ ವರ್ಣವು ಮಸುಕಾ (ಕಲರ್‌ಸೇಡ್)ದದ್ದು ಕಂಡುಬರುತ್ತದೆ.

ವಿಷಾದದ ಸಂಗತಿ ಎಂದರೆ 'ಶುಭರಾಯರ ಮಠದ ಕಲಾಕೃತಿಗಳ ಅಲ್ಪಯುಷಿಯಾದ ಒಂದು ಕಲಾಮಾರ್ಗವಾಗಿದ್ದು ಅದು ಶುಭರಾಯರ ನಂತರ ಶುಭರಾಯರ ಮಠದಲ್ಲೂ ಚಿತ್ರಕಲಾಕೃತಿಗಳ ರಚನಾಪ್ರಕ್ರಿಯೆ ಮುಂದುವರೆಯಲ್ಲಿಲ್ಲ. ಈ ಶೈಲಿಯ ಕಲಾಕೃತಿಗಳನ್ನು ಸೃಷ್ಟಿಸಬೇಕೆಂಬ ಯಾವುದೇ ಕಲಾವಿದನಾಗಲಿ, ಕಲಾಸಕ್ತನಾಗಲಿ ಆಶ್ರಯ ನೀಡದೆ ಪ್ರಜ್ಞಾಪೂರ್ವ ಪ್ರಯತ್ನವನ್ನು ಮಾಡಲಿಲ್ಲ. ಶುಭರಾಯರು ಮಠದಲ್ಲಿ ದೇವರ ಪ್ರತಿಮೆಯನ್ನಿಡುವ ಮಂಟಪದ ದ್ವಾರದ ಅಲಂಕಾರಕ್ಕಾಗಿ ಚಿತ್ರ ರಚಿಸಿದ್ದು. ಇಂತಹ ಅಲಂಕಾರಿಕ ಚಿತ್ರಗಳನ್ನು ಮೊದಲು ಕಾಗದದ ಮೇಲೆ ಬಿಡಿಸಿಕೊಂಡು ಅನಂತರ ಮಂಟಪದ ಆಕಾರಕ್ಕನುಗುಣವಾಗಿ ಮಂಟಪದ ಪೀಠಿಕೆ (ಪ್ಯಾನಲ್)ಗಳ ಮೇಲೆ ರಚಿಸಲಾಗಿದ್ದು. ಪ್ರತಿವರ್ಷ ಜಾತ್ರೆ, ಹಬ್ಬ ಹರಿದಿನಗಳಲ್ಲಿ ಒಮ್ಮೆ ನಿರ್ಮಿಸಿದ ಮಂಟಪವನ್ನು ಉಪಯೋಗಿಸಿದ್ದು ಮಂಟಪದ ಮೇಲೆ ಚಿತ್ರಿಸಿದ ಕಲಾಕೃತಿಗಳ ಮೇಲೆಯ ಬಣ್ಣ ಬಣ್ಣದ ಹಾಳೆಗಳನ್ನು (ಪರಪರಿ) ಕಟಿಂಗಳನ್ನು ಅಂಟಿಸಿ ಹಾಗೂ ಮಂಟಪದ ಆಕರ್ಷಣೆಗಾಗಿ ಚಿತ್ರಗಳ ಮೇಲೆ ಎನಾಮಲ್ ನಂತಹ ತೈಲವರ್ಣಲೇಪನ ಮಾಡಿರುವುದು ಕಂಡುಬರುತ್ತದೆ.

ಹೀಗೆ ಶುಭರಾಯರ ದೀರ್ಘಾಯುಷ್ಯ ಅಭೂತಪೂರ್ವ ಕಲಾಕೃತಿಗಳ ಸ್ಥಿತಿ ಸದ್ಯಕ್ಕೆ ಅವನತಿಯ ಸ್ಥಿತಿಯಲ್ಲಿದ್ದು, ಇಂತಹ ಕಲಾಕೃತಿಗಳು ವಿವಿಧ ರೀತಿಯ ಆಪತ್ತುಗಳಿಗೆ ಸಿಲುಕಿ ನಶಿಸಿ ಹೋಗುತ್ತಿರುವುದು ತಿಳಿದು ಬರುತ್ತದೆ. ಆದ ಕಾರಣ ಪ್ರಸ್ತುತ ಅಧ್ಯಯನ ಕಲಾಕೃತಿಗಳ ಆಪತ್ತು ಸಂರಕ್ಷಣೆಯ ಕುರಿತು ವ್ಯವಸ್ಥಿತವಾಗಿ ವಿಂಗಡಿಸಿ ಈ ಕೆಳಗೆ ಹಂತ ಹಂತವಾಗಿ ವಿವರಿಸಲಾಗಿದೆ.



**ಶುಭರಾಯರ ಮಠದಲ್ಲಿನ ಚಿತ್ರಗಳ ಆಪತ್ತುಗಳು.**

೧. ಸ್ವಾಭಾವಿಕ ಆಪತ್ತು
೨. ಪ್ರಾಕೃತಿಕ ಆಪತ್ತು
೩. ವ್ಯಕ್ತಿಗತ ಆಪತ್ತು
೪. ಕ್ರಿಮಿಕೀಟಗಳಿಂದಾಗುವ ಆಪತ್ತು

**೧. ಸ್ವಾಭಾವಿಕ ಆಪತ್ತು :**

ಶುಭರಾಯರ ಮಠದಲ್ಲಿನ ಮತ್ತು ಅವರು ರಚಿಸಿದ ಕಲಾಕೃತಿಗಳು ದೀರ್ಘಾಯುಷಿಯಾಗಿದ್ದು ಕಾಲಕ್ರಮೇಣ ಚಿತ್ರಗಳಿಗೆ ಉಪಯೋಗಿಸಲಾದ ವಸ್ತುಗಳ ಸತ್ವ ಕಡಿಮೆಯಾಗಿ ಚಿತ್ರಗಳು ಹಾಳಾಗುವುದನ್ನು ಇಲ್ಲಿ ಸ್ವಾಭಾವಿಕ ಆಪತ್ತು ಎಂದು ಪರಿಗಣಿಸಲಾಗಿದೆ. ಕಲಾಕೃತಿ ರಚನೆಗೆ ಉಪಯೋಗಿಸಿದ ಹಾಳೆ ಬಣ್ಣಗಳು ಕಾಲಾಂತರದಲ್ಲಿ ಸತ್ವ ಮತ್ತು ನೈತಿಕತೆಯನ್ನು ಕಳೆದುಕೊಂಡು ಮುಸುಕಾಗಿವೆ. ಹಾಳೆಗಳು ಹರಿದು ಹೋಗಿದ್ದು ಅಲ್ಲಲ್ಲಿ ಅಲ್ಪಸ್ವಲ್ಪ ಉಳಿದಿದ್ದು ಕಂಡು ಬಂದಿದೆ. ಈ ರೀತಿಯಾಗಿ ಸ್ವಾಭಾವಿಕ ಆಪತ್ತುಗಳಿಗೆ ಸಿಲುಕಿ ಇಲ್ಲಿನ ಹಲವು ಕಲಾಕೃತಿಗಳು ವಿನಾಶದ ಅಂಚಿಗೆ ಸಿಲುಕಿ ಹೋಗಿವೆ.

**೨. ಪ್ರಾಕೃತಿಕ ಆಪತ್ತು :**

ಪ್ರಕೃತಿಯಲ್ಲಿನ ನೀರು, ಬೆಂಕಿ, ಗಾಳಿ ಹೀಗೆ ಪರಿಸರದಲ್ಲಾಗುವ ಮುಂತಾದ ಬದಲಾವಣೆಗಳಿಂದ ಚಿತ್ರಗಳು ತಮ್ಮ ನೈಜಗುಣಗಳನ್ನು ಕಳೆದುಕೊಂಡು ಹಾಳಾಗುತ್ತವೆ.

**ನೀರು :** ಚಿತ್ರಗಳಿಗೊದಗುವ ಆಪತ್ತುಗಳಲ್ಲಿ ನೀರಿನಿಂದ ಹೆಚ್ಚು ಹಾನಿ ಸಂಭವಿಸುತ್ತದೆ ಶುಭರಾಯರ ಮಠದಲ್ಲಿನ ಮಂಟಪದ ಮೇಲೆ ಚಿತ್ರಿಸಿದ ಚಿತ್ರಗಳಿಗೆ ಪೂಜೆ ಮಾಡುವ ಸಂದರ್ಭದಲ್ಲಿ ನೀರನ್ನು ಸಿಂಪಡಿಸಿ ಕಾಲಕ್ರಮೇಣ ಸೂಸಿ ಮಂಟಪ ತಂಪಾಗಿ ಇಲ್ಲಿನ ಚಿತ್ರಗಳು ಅಳಿಸಿ ಹೋಗಿರಬಹುದೆಂದು ಊಹಿಸಲಾಗಿದೆ.

**೩. ವ್ಯಕ್ತಿಗತ ಆಪತ್ತು :**

ಇಲ್ಲಿ ಜನಸಾಮಾನ್ಯರು ತಿಳಿದು ಅಥವಾ ತಿಳಿಯದೆ ಚಿತ್ರಕಲಾಕೃತಿಗಳನ್ನು ಹಾಳು ಮಾಡಿರುವುದು ಕಂಡುಬರುತ್ತದೆ. ಪ್ರಮುಖವಾಗಿ ಹಬ್ಬ ಹರಿದಿನ, ಜಾತ್ರೆಯ ಸಂದರ್ಭದಲ್ಲಿ ಮಂಟಪಗಳಿಗೆ ಸುಣ್ಣ, ಬಣ್ಣ ಹಚ್ಚುವುದು ಪರಪರಿಯಂತಹ ಅಲಂಕಾರಿಕ ಪೇಪರ ಕಟಿಂಗಳನ್ನು ಅಂಟಿಸುವುದು. ಹೆಚ್ಚು ಪ್ರಕಾಶಮಾನವಾದ ವಿದ್ಯುತ್ ದ್ವೀಪಗಳನ್ನು ಉರಿಸುವುದು. ಪೂಜೆ ಪುನಸ್ಕಾರದ ಸಂದರ್ಭದಲ್ಲಿ ದೀಪ. ಅಗರಬತ್ತಿಯನ್ನು ಬೆಳಗಿಸುವುದು ಮಠದ ದುರಸ್ಥಿ ಅಥವಾ ನವೀಕರಣಗೊಳ್ಳುವಿಕೆ ಹೀಗೆ ವಿವಿಧ ಸಾಮಾನ್ಯ ಕಾರಣಗಳಿಂದ ಚಿತ್ರಗಳು ಹಾಳಾಗುವುದುಂಟು. ಉದಾ : ಕರ್ನಾಟಕದಲ್ಲಿನ ಬುಜರ ಕೆಂಚನ ಹಳ್ಳಿಯ ದೇವಾಲಯದಲ್ಲಿನ ಸಾವಿರಕ್ಕೂ ಹೆಚ್ಚು ವರ್ಣಚಿತ್ರಗಳು ನಶಿಸಿಹೋಗಿ ಅಲ್ಲಿ ಚಿತ್ರದ ಕುರುವೆ ಇಲ್ಲದಂತಾಗಿದೆ. ಈ ರೀತಿಯಲ್ಲಿ



ಧಾರವಾಡದ ಅಮ್ಮಿನಭಾವಿಯ ಮಠದಲ್ಲಿನ ಚಿತ್ರಗಳು, ನಿಪ್ಪಾಣಿವಾಡೆಯಲ್ಲಿನ ಚಿತ್ರಗಳು, ರಾಯಚೂರಿನ ಕಾಜಿನ ಗೌಡರ ಮನೆಯಲ್ಲಿನ ಚಿತ್ರಗಳು, ನರಗುಂದ ಭಿತ್ತಿಚಿತ್ರಗಳು ಹಾಳಾಗಿರುವುದು ಕಂಡುಬರುತ್ತದೆ. ಇದೇ ರೀತಿ ಶುಭರಾಯರ ಮಠದಲ್ಲಿನ ಮಂಟಪಗಳ ಮೇಲೆ ರಚಿಸಿದ ವರ್ಣರಂಜಿತ ಚಿತ್ರಗಳ ಮೇಲೆ ಕಲೆಯ ಅರಿವಿಲ್ಲಿದ ವ್ಯಕ್ತಿಗಳು ಪೇಪರ ಕಟಿಂಗ್‌ಗಳನ್ನು ಮತ್ತು ಎನಾಮಲ್ ನಂತಹ ತೈಲವರ್ಣಗಳನ್ನು ಲೇಪಿಸುವುದರಿಂದ ಚಿತ್ರಗಳ ಕುರುಹು ಇಲ್ಲದಂತೆ ಮಾಡಿದ್ದಾರೆ.

**೪. ಕ್ರಿಮಿಕೀಟಗಳಿಂದ ಆಪತ್ತು :**

ಕ್ರಿಮಿಕೀಟಗಳಿಂದಲೂ ಕಾಲಾನುಕ್ರಮದಲ್ಲಿ ಚಿತ್ರಗಳಿಗೆ ಹಾನಿ ತಪ್ಪಿದ್ದಲ್ಲ. ಪೇಪರಗಳ ಮೇಲೆ ಮತ್ತು ಮಂಟಪ, ಪಠಗಳಂತಹ ಹಿನ್ನಲೆ ಸಾಮಾಗ್ರಿಗಳ ಮೇಲೆ ರಚಿಸಿದ ಕಲಾಕೃತಿಗಳು ನಾಶವಾಗಲು ಕಣ್ಣಿಗೆ ಕಾಣುವ ಮತ್ತು ಕಾಣದೆ ಇರುವಂತಹ ಅನೇಕ ಕೀಟಗಳು ಹಾಗೂ ಸೂಕ್ಷ್ಮಾಣು ಜೀವಿಗಳು ಚಿತ್ರಗಳನ್ನು ನಾಶಮಾಡಿವೆ. ಮತ್ತು ಅವುಗಳ ಸಹಜ ಕ್ರಿಯೆಗಳಿಂದ ಬಿಡುಗೊಂಡ ವಿವಿಧ ರೀತಿಯ ಆಮ್ಲಗಳಿಂದಲೂ ಚಿತ್ರಗಳು ಉದುರಿಹೋಗಿವೆ ಮತ್ತೆ ಕೆಲವೊಂದು ಕ್ರಿಮಿಕೀಟಗಳು ಹಾಳೆ, ವರ್ಣಗಳಂತಹ ವಸ್ತುಗಳನ್ನು ಅಹಾರಕ್ಕಾಗಿ ಬಳಸಿದಾಗ ಕಲಾಕೃತಿಗಳಲ್ಲಿ ಬಣ್ಣ ಹಾಳೆಗಳು ಹರಿದು, ಉದರಿಹೋಗಿವೆ. ಈ ರೀತಿಯಾಗಿ ವಿವಿಧ ಪ್ರದೇಶಗಳಲ್ಲಿ ನಮ್ಮ ಪ್ರಾಚೀನ ವರ್ಣಚಿತ್ರಗಳು ಸುಮಾರು ೬೦% ನಾಶವಾಗಿ ಹೋಗಿವೆ. ಇಂತಹ ಕ್ರಿಮಿಕೀಟಗಳ ಆಪತ್ತಿಗೆ ಇಲ್ಲಿನ ಹಲವು ಚಿತ್ರಗಳು ನಶಿಸಿ ಹೋಗಿರುವುದನ್ನು ನಾವು ಕಾಣಬಹುದು.

ಅವನತಿಯ ಹಾದಿಯಲ್ಲಿರುವ ಇಂತಹ ಪ್ರಾಚೀನ ವರ್ಣಚಿತ್ರಗಳನ್ನು ಹಲವು ಆಧುನಿಕ ವಿಧಾನಗಳಿಂದ ಸಂರಕ್ಷಿಸಬಹುದಾಗಿದೆ. ವಿರೂಪಗೊಂಡ ಕಲಾಕೃತಿಗಳನ್ನು ವೈಜ್ಞಾನಿಕ ವಿಧಾನಗಳಿಂದ ಕೆಲವು ವಸ್ತುಗಳನ್ನು ಬಳಸಿ ಸಾಧ್ಯವಾದ ಮಟ್ಟಿಗೆ, ಇದ್ದ ನೈಜತೆಗೆ ಸಮೀಪತರುವಂತಹ ಕೆಲವು ತಂತ್ರಗಳಿಂದ ರಾಸಾಯನಿಕಗಳ ಮೂಲಕ ಅದಷ್ಟು ಮಟ್ಟಿಗೆ ಸುವ್ಯವಸ್ಥಿತವಾಗಿ ಸಂರಕ್ಷಿಸಬಹುದು. ಇಲ್ಲಿಯ ವರ್ಣಚಿತ್ರಕಲೆಯ ಸಂರಕ್ಷಣೆಯ ಕ್ರಮಗಳನ್ನು ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ನೇರಕ್ರಮಗಳು ಮತ್ತು ಪೂರಕ ಕ್ರಮಗಳೆಂದು ಎರಡು ವಿಭಾಗಗಳಲ್ಲಿ ವಿಂಗಡಿಸಿ ಅಧ್ಯಯನ ಮಾಡಲಾಗಿದೆ.

**೧. ನೇರ ಕ್ರಮಗಳು**

**೨. ಪೂರಕ ಕ್ರಮಗಳು**

**೧. ನೇರ ಕ್ರಮಗಳು**

ಅ. ಪುನಃರೂಪಿಸುವುದು

ಆ. ಪ್ರತಿಮಾಡಿಸುವುದು

ಇ. ಛಾಯಾಚಿತ್ರಣ

ಈ. ಸ್ಲೈಡ್

ಉ. ವಿಡಿಯೋ ಚಿತ್ರಿಕರಣ



**ಅ. ಪುನಃರೂಪಿಸುವುದು :**

ಪ್ರಾಚೀನ ವರ್ಣಚಿತ್ರಗಳ ಸಂರಕ್ಷಣೆಯ ನೇರಕ್ರಮಗಳಲ್ಲಿ ಹಾಳಾದ ವರ್ಣಚಿತ್ರಗಳನ್ನು ಪುನಃರೂಪಿಸುವುದು ಒಂದು ಕ್ರಮವಾಗಿದೆ. ಶುಭರಾಯರು ರಚಿಸಿದ ವರ್ಣಚಿತ್ರಗಳನ್ನು ಬಟರ ಪೇಪರಗಳನ್ನು ಬಳಸಿ ರೇಖಾಚಿತ್ರಣವನ್ನು ಬಿಡಿಸಿ ಮೂಲಕೃತಿಯಲ್ಲಿರುವಂತೆ ಮತ್ತು ಚಿತ್ರವರ್ಣಗಳಿಗೆ ಸರಿಹೊಂದುವ ವರ್ಣವನ್ನು ಬಳಸಿ, ಕಲಾಕೃತಿಗಳನ್ನು ಪುನಃರೂಪಿಸುವದರಿಂದ ಶುಭರಾಯರ ಚಿತ್ರಗಳನ್ನು ಸಂರಕ್ಷಿಸಬಹುದು.

**ಆ. ಪ್ರತಿಮಾಡುವುದು ಮತ್ತು ನಕಲು ಮಾಡುವುದು :**

ಇಂತಹ ಚಿತ್ರಗಳ ರಕ್ಷಣೆಯ ಇನ್ನೊಂದು ರೂಪವೆಂದರೆ ನಕಲು ಮಾಡುವುದು. ಮೂಲಕೃತಿಯ ಮೇಲೆ ನಕಲು ಕಾಗದವಿಟ್ಟು (ಬಟರಪೇಪರ) ಯಥಾವತ್ತಾಗಿ ಚಿತ್ರವನ್ನು ಮೂಡಿಸಿಕೊಂಡು ಮೂಲಚಿತ್ರವನ್ನು ಹೋಲುವಂತೆಯೇ ವರ್ಣಲೇಪಿಸುವುದು ಒಂದು ಕ್ರಮ.

ಹೀಗೆ ಚಿತ್ರಗಳನ್ನು ಪ್ರತಿಮಾಡಿ ಕಾಯ್ದಿರಿಸಬಹುದಾದರೂ ಅದರಲ್ಲಿನ ಮೂಲಚಿತ್ರಕ್ಕಿಂತ ಅಲ್ಪಸಲ್ಪ ಬಿನ್ನತೆಗಳು ಕಂಡುಬರುತ್ತವೆ. ಮೂಲಚಿತ್ರಗಳಲ್ಲಿ ಪ್ರಾಚೀನ ಕಲಾವಿದರು ಬಳಸಿದ ಖನಿಜಮೂಲ, ಸಸ್ಯಮೂಲ ಬಣ್ಣಗಳ ಬಳಕೆಯಾಗಿದ್ದು, ಇಂದಿನವರು ಸಿದ್ದ ರಾಸಾಯನಿಕ ವರ್ಣಬಳಸಿದಾಗ ಮೂಲ ಚಿತ್ರಗಳ ವರ್ಣ ವೈವಿದ್ಯತೆಗಿಂತ ಬೇರೆಯಾದ ಹೊಳಪು ಬರುವ ಸಂಭವವಿರುತ್ತದೆ. ಚಿತ್ರಗಳನ್ನು ಪ್ರತಿಮಾಡುವಂತೆ ಮೂಲ ಕೃತಿಯನ್ನು ಎದುರಿಗಿಟ್ಟು ಅದು ಇದ್ದಂತೆ ರಚಿಸಿಸುದು ಇನ್ನೊಂದು ವಿಧಾನ.

ಇಂತಹ ಅನೇಕ ಆಕರಗಳಿಂದ ಪ್ರತಿಮಾಡಿದ, ನಕಲು ಮಾಡಿದ ಚಿತ್ರಗಳ ಸ್ವರೂಪ ಲಕ್ಷಣಗಳು ಮೂಲಚಿತ್ರಗಳಂತೆ ಯಥಾವತ್ತಾಗಿ ಸರಿಸಮಾನಾಗುವುದಿಲ್ಲವಾದರೂ ಕೂಡಾ ದಾಖಲೆಯ ದೃಷ್ಟಿಯಿಂದ ಚಿತ್ರಗಳನ್ನು ಪ್ರತಿಕೃತಿ ಮತ್ತು ನಕಲು ಮಾಡಿಸಬಹುದಾಗಿದೆ.

**ಇ. ಛಾಯಾಚಿತ್ರಣ ಮಾಡುವುದು**

ಹಾಳಾಗುತ್ತಿರುವ ವರ್ಣಚಿತ್ರಗಳನ್ನು ಛಾಯಾಚಿತ್ರಣ ಮಾಡಿಸಿ ದಾಖಲಿಸುವುದು ಚಿತ್ರಗಳ ರಕ್ಷಣೆಯ ಮತ್ತೊಂದು ಕ್ರಮವಾಗಿದೆ. ಛಾಯಾಚಿತ್ರಗಳಲ್ಲಿ ಇಂದು ಅತ್ಯಾಧುನಿಕ ವಿಧಾನಗಳು ಬಂದಿದ್ದು ಚಿತ್ರಗಳನ್ನು ಯತಾವತ್ತಾಗಿ ಸೆರೆಹಿಡಿಯಬಹುದು. ಹೀಗೆ ಸೆರೆಹಿಡಿದ ಚಿತ್ರಗಳ ಮೂಲ ಸ್ವರೂಪ, ಬಣ್ಣಗಳು, ಚಿತ್ರದಲ್ಲಿನ ತಾಂತ್ರಿಕ ಗುಣಗಳು ಯತಾವತ್ತಾಗಿ ಮೂಡಿಬಂದು ಇದು ಮೂಲಚಿತ್ರಕ್ಕೆ ಸಮೀಪವಾಗಿರುತ್ತವೆ. ಅಲ್ಲದೇ ಈ ಮೂಲಕ ಚಿತ್ರಗಳನ್ನು ಸಮೀಪದಿಂದ ನೋಡಿ ತಿಳಿದುಕೊಳ್ಳುವಲ್ಲಿ ಇದು ಹೆಚ್ಚು ಸೂಕ್ತವಾಗಿ ಕಂಡುಬರುತ್ತದೆ.

**ಈ. ಸ್ಲೈಡ್‌ಮಾಡುವುದು :**

ಛಾಯಾಚಿತ್ರಣ ಮಾಡಿದ ಚಿತ್ರಗಳನ್ನು ಸ್ಲೈಡ್‌ಗಳನ್ನು ಮಾರ್ಪಡಿಸಿ ದೊಡ್ಡ ಪ್ರಮಾಣದ ಸ್ಕ್ರೀನ್‌ಮೇಲೆ ಮೂಡಿಸಿ ಚಿತ್ರಗಳನ್ನು ವೀಕ್ಷಿಸುವುದರಿಂದ ಚಿತ್ರಗಳ ಸ್ವರೂಪವನ್ನು ಸಂಕ್ಷಿಪ್ತವಾಗಿ ತಿಳಿದುಕೊಳ್ಳುವುದು ಉತ್ತಮ ಸಾಧನವಾಗಿದೆ.



**ಉ. ವಿಡಿಯೋ ಚಿತ್ರಿಕರಣ :**

ಪ್ರಾಚೀನ ಚಿತ್ರಗಳನ್ನು ವಿಡಿಯೋಚಿತ್ರಣ ಮಾಡುವುದು ರಕ್ಷಣೆಯ ದೃಷ್ಟಿಯಿಂದ ಮತ್ತು ಪರಂಪರೆಯ ದಾಖಲೆಯ ದೃಷ್ಟಿಯಿಂದ ಇನ್ನುಳಿದ ಕ್ರಮಗಳಿಗಿಂತಲೂ ಈ ವಿಧಾನ ಸೂಕ್ತವಾದುದು. ಕಾರಣ ವಿಡಿಯೋ ಚಿತ್ರಿಕರಣ ಮಾಡಿದ ದೃಶ್ಯಗಳನ್ನು ನೋಡಿದಾಗ ನೇರವಾಗಿ ಚಿತ್ರಗಳ ನೆಲೆಯಲ್ಲಿ ನಿಂತುನೋಡಿದಂತಹ ಅನುಭವವಾಗುತ್ತದೆ.

ಹೀಗೆ ವಿಡಿಯೋ ಚಿತ್ರಿಕರಣ ಮಾಡಿದ ಚಿತ್ರಗಳನ್ನು ಈ ಪ್ರದೇಶದ ಸಾಂಸ್ಕೃತಿಕ ಪರಿಸರದ ಚರಿತ್ರೆಯ ವಿವರವನ್ನು ಧ್ವನಿಸಂಯೋಜನೆ ಮಾಡಿ ದೂರದರ್ಶನ, ಖಾಸಗೀ ಚಾನಲ್‌ಗಳಂತಹ ಟಿ.ವಿ ಮಾಧ್ಯಮಗಳಲ್ಲಿ ಪ್ರಸಾರಮಾಡಬೇಕು. ಹೀಗೆ ಮಾಡುವುದರಿಂದ ಪ್ರಾಚೀನ ವರ್ಣಚಿತ್ರಗಳ ಅಂದಿನ ಪರಿಸರ, ಆಡಳಿತ, ಚಾರಿತ್ರಿಕ ಅಂಶಗಳನ್ನು ದಾಖಲೆಗೊಳಿಸುವುದರಿಂದ ಜನಸಾಮಾನ್ಯರಿಗೆ, ಕಲಾಭಿಮಾನಿಗಳಿಗೆ, ಅಧ್ಯಯನಕಾರರಿಗೆ, ಚರಿತ್ರೆಯ ಮೂಲ ಸ್ವರೂಪವನ್ನು ದೊರಕಿಸುವಲ್ಲಿ ಸಹಾಯಕವಾಗುತ್ತದೆ. ಹಾಗೂ ಈ ಮೂಲಕ ಪ್ರಾಚೀನ ವರ್ಣಚಿತ್ರಗಳ ಮಹತ್ವವನ್ನು ದಾಖಲಿಸುವುದಾಗಿದೆ.

**೨. ಪೂರಕ ಕ್ರಮಗಳು :**

ಅ. ಪುಸ್ತಕಗಳಲ್ಲಿ ಕಲಾಕೃತಿಗಳನ್ನು ಮುದ್ರಿಸುವುದು ಮತ್ತು ಕಲಾಪ್ರದರ್ಶನ ಮಾಡುವುದು.

ಆ. ಅಲಂಕಾರಿಕ ವಾಣಿಜ್ಯ ದಾಸ್ತಾನುಗಳಲ್ಲಿ ಚಿತ್ರಗಳನ್ನು ರಚಿಸುವುದು ಮತ್ತು ನಕಲು ಮಾಡುವುದು.

ವರ್ಣಚಿತ್ರಕಲೆಯ ಸಂರಕ್ಷಣೆಯಲ್ಲಿ ಅನುಸರಿಸುವ ನೇರಕ್ರಮಗಳಂತೆ ಪೂರಕವಾಗಿ ಕೆಲವು ಕ್ರಮಗಳನ್ನು ಅನುಸರಿಸುವುದರಿಂದ ಇಂತಹ ಚಿತ್ರಗಳನ್ನು ಸಂರಕ್ಷಣೆಗೊಳಿಸಬಹುದು. ಪೂರಕ ಕ್ರಮಗಳಲ್ಲಿ ಮೊದಲಿಗೆ ಪುಸ್ತಕಗಳಲ್ಲಿ ವರ್ಣಚಿತ್ರಗಳ ಛಾಯಾಚಿತ್ರಗಳನ್ನು ಮುದ್ರಿಸುವುದು ಒಂದು ರಕ್ಷಣೆಯ ಕ್ರಮವಾಗಿದೆ. ಇತಿಹಾಸ ಪುಸ್ತಕಗಳಲ್ಲಿ, ಶಾಲಾ ಕಾಲೇಜುಗಳ ಪಠ್ಯಪುಸ್ತಕಗಳಲ್ಲಿ ಮತ್ತು ಮಾಸ ಪತ್ರಿಕೆಗಳಲ್ಲಿ, ಅವಶ್ಯವಿದ್ದಲ್ಲಿ ಈ ಚಿತ್ರಗಳನ್ನು ಮುದ್ರಿಸುವುದರಿಂದ ಈ ಮೂಲಕ ವಿದ್ಯಾರ್ಥಿಗಳಿಗೆ ಕಲಾಸಕ್ತರಿಗೆ, ಜನಸಾಮಾನ್ಯರಿಗೆ ಶುಭರಾಯರ ಚಿತ್ರಕಲೆಯ ಬಗ್ಗೆ ಪರಿಚಯಿಸಿದಂತಾಗುತ್ತದೆ.

ಇದರಿಂದ ಚಿತ್ರಗಳನ್ನು ಪರೋಕ್ಷವಾಗಿ ರಕ್ಷಣೆ ಮಾಡಬಹುದು ಹಾಗೂ ಮುಖ್ಯವಾಗಿ ಯುವ ಕಲಾವಿದರು ಇಂತಹ ಅಪರೂಪದ ಚಿತ್ರಕಲೆಯ ಬಗ್ಗೆ ಆಸಕ್ತಿಹೊಂದಿ ಹಾಗು ಅದರ ಮಹತ್ವವನ್ನು ಅರಿತು ಭಿನ್ನ ಭಿನ್ನವಾದ ದೃಷ್ಟಿಕೋನದಿಂದ ಪರಾಮರ್ಶಿಸಿ ಸಮಗ್ರವಾದ ಸಂಶೋಧನೆ ಅಧ್ಯಯನ ಮಾಡುವ ಅವಶ್ಯಕತೆ ಇದೆ. ಇವಲ್ಲದೆ ಅಲಂಕಾರಿಕ ವಾಣಿಜ್ಯ ವಸ್ತುಗಳಲ್ಲಿ ಕೂಡ ಚಿತ್ರಗಳನ್ನು ರಚಿಸಿ ಸಂರಕ್ಷಿಸಬಹುದಾಗಿದೆ. ಶುಭಾಷಿತ ಪತ್ರಗಳು, ಕ್ಯಾಲೆಂಡರ್‌ಗಳ ಮೇಲೆ ಚಿತ್ರಗಳನ್ನು ಮುದ್ರಿಸುವುದರಿಂದ ಇವು ವಿಭಿನ್ನವಾಗಿ ಜನರನ್ನು ಆಕರ್ಷಿಸುತ್ತವೆ ಈ ಮುಖಾಂತರ ಜನರಿಗೆ ಚಿತ್ರಗಳನ್ನು ಪರಿಚಯಿಸಿದಂತಾಗುತ್ತದೆ.

* * *




ಸೋಲಾಪುರದಲ್ಲಿ ಶುಭರಾಯರ ಆರ್ಟ್‌ಗ್ಯಾಲರಿ



ಶುಭರಾಯರ ಗ್ಯಾಲರಿಯಲ್ಲಿ ಕಲಾಕೃತಿಗಳೊಂದಿಗೆ ಸಂಶೋಧಕಿ



ಅಧ್ಯಾಯ : ಏಳು

# ಸಮಾರೋಪ

ಮಾನವನ ಆಂತರಿಕ ಬದುಕಿಗೂ ಸಂಬಂಧಿಸಿದ್ದು ಸಂಸ್ಕಾರ ಆತನ ಬದುಕಿನ ಪರಿಣಿತ ಫಲವೇ ಸಂಸ್ಕೃತಿ ಎಂತಲೂ ಹೇಳುತ್ತಾರೆ. ಸಂಸ್ಕೃತಿಯ ಭಾಗವೇ ಆಗಿರುವ ಕಲೆ ಕಲಾವಿದನ ಪ್ರತಿಭೆಯೇ ಪ್ರತಿನಿಧಿ ಮಾತ್ರವಲ್ಲದೇ ಜನ ಸಮುದಾಯದ ಪ್ರತಿಬಿಂಬವೂ ಹೌದು. ಕಲಾವಿದ ರಚಿಸಿದ ಕಲಾಕೃತಿಗಳಲ್ಲಿ ಜನಜೀವನದ ಪ್ರತಿಬಿಂಬವನ್ನು ಒಂದು ಸಮುದಾಯದ ಜನಜೀವನ ಮತ್ತು ಸಂಸ್ಕೃತಿಯನ್ನು ದಾಖಲಿಸುವಲ್ಲಿ ಕಲಾಕೃತಿಗಳ ಪಾತ್ರ ಬಹು ಮುಖ್ಯವಾಗಿದೆ. ಒಂದು ನಾಡಿನ ಹಿರಿಮೆಯನ್ನು ಸಾರುವಲ್ಲಿ ಅಲ್ಲಿನ ಸಾಹಿತ್ಯ ಮತ್ತು ಕಲಾಪ್ರಕಾರಗಳು ಪ್ರಮುಖ ಪಾತ್ರವಹಿಸುತ್ತವೆ. ವ್ಯಕ್ತಿಯೊಬ್ಬನು ತನ್ನ ನಾಡಿನಲ್ಲಿ ಬಾಳಿ ಬದುಕಿ ಅದರ ನೆಲದಲ್ಲಿ ನಡೆದು ನೀರಿನಲ್ಲಿ ಈಜಿ ಅಲ್ಲಿನ ಗಾಳಿಯನ್ನು ಉಸಿರಾಡಿ ಅಲ್ಲಿನ ಯಾವತ್ತೂ ಅನುಭವಗಳಿಂದ ತನ್ನ ಮನಸ್ಸನ್ನು ಬೆಳೆಸಿಕೊಂಡು ಪ್ರಬುದ್ಧನಾಗುತ್ತಾನೆ. ಆ ಆವರಣವು ಕಲಾವಿದನಲ್ಲಿ ಹುಟ್ಟಿಸಿದ ನೂರಾರು ಸಿಹಿ–ಕಹಿ ಅನುಭವಗಳೆಲ್ಲ ಒಂದೊಂದು ಕಲಾಸಾಧನೆಯೇ ಮೂಲಕ ಪ್ರಕಟವಾಗುತ್ತದೆ. ಅವನು ಜೀವನವನ್ನು ನೋಡುವ ನೋಟ, ಪರಿಭಾವಿಸುವ, ನಡೆಯುವ ದಾರಿಗಳು ಇತರರಿಗಿಂತ ಭಿನ್ನವಾಗಿರುತ್ತವೆ. ಕಲಾವಿದ ಬೆಳೆದುಬಂದಿರುವ ಪರಿಸರ ದೇಶಿಯ ಸಂಸ್ಕೃತಿಗಳು ಅವನ ಕಲಾಕೃತಿಯ ರಚನೆಯ ಮೇಲೆ ಪಟ್ಟ ಪ್ರಭಾವವನ್ನು ಬೀರುತ್ತವೆ. ಈ ಹಿನ್ನಲೆಯಲ್ಲಿ ನೋಡಿದಾಗ ಕಲೆ ಮತ್ತು ಕಲಾವಿದರ ಕುರಿತು ಅಧ್ಯಯನಗಳು ಪರೋಕ್ಷವಾಗಿ ಸಂಸ್ಕೃತಿ, ಸಮಾಜ ಮತ್ತು ಸಮುದಾಯಕ ಅಧ್ಯಯನಗಳೇ ಆಗಿರುತ್ತವೆ ಈ ಹಿನ್ನಲೆಯಲ್ಲಿ ಪ್ರಸುತ್ತ ಅಧ್ಯಯನವನ್ನು ಐದು ಅಧ್ಯಾಯಗಳಲ್ಲಿ ವಿಂಗಡಿಸಿದ್ದು, ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿಸುವ ವಿಷಯದ ಕುರಿತಂತೆ ಅದರ ಸಂಕ್ಷಿಪ್ತ ಸ್ವರೂಪದ ವಿವರವನ್ನು ಇಲ್ಲಿ ಕೊಡಲಾಗಿದೆ.

**ಮೊದಲನೆಯ ಅಧ್ಯಾಯದಲ್ಲಿ** : ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ವೈಧಾನಿಕತೆ ಕುರಿತು ಮೂಲ ಆಕರ ಸಾಮಗ್ರಿ ಮತ್ತು ಅನುಷಂಗಿಕ ಆಕರ ಸಾಮಗ್ರಿ ಕುರಿತಾದ ವಿವರಣೆ ಒಳಗೊಂಡಿದೆ. ಇಲ್ಲಿ ಇದುವರೆಗೆ ನಡೆದ ಈ ಕ್ಷೇತ್ರದ ಅಧ್ಯಯನದ ಸಮೀಕ್ಷೆಯನ್ನುಮಾಡಿ ಮುಂದಿನ ಅಧ್ಯಯನಕ್ಕೆ ಭೂಮಿಕೆಯನ್ನು

ಸಿದ್ಧಪಡಿಸಿಕೊಳ್ಳಲಾಗಿದೆ. ಇಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮುಂತಾದ ಅಧ್ಯಯನದ ಸ್ವರೂಪವನ್ನು ಈ ಅಧ್ಯಾಯಹೊಂದಿದೆ.

**ಎರಡನೆಯ ಅಧ್ಯಾಯದಲ್ಲಿ** : ಸಂತ ಶುಭರಾಯರ ಜೀವನ, ಕುರಿತು ಹಾಗೇ ಈ ಕಲಾವಿದ ಬೆಳೆದು ಬಂದ ಹಿನ್ನೆಲೆ ಹುಟ್ಟಿದ ಸ್ಥಳ, ಹಾಗೂ ಶುಭರಾಯರು ಆಡುವ ಭಾಷೆಗಳು, ಮತ್ತು ಟಿಪ್ಪುಸುಲ್ತಾನನ ಬಳಿ, ಪ್ರಧಾನಮಂತ್ರಿಯಾಗಿ ಸೇವೆಮಾಡಿದ ವಿವರ ಅಲ್ಲದೆ ಒಬ್ಬ ಸಂಗೀತಗಾರ, ನೃತ್ಯಗಾರ, ಕವಿ. ಇತ್ಯಾದಿಗಳ ಕುರಿತು ಇಲ್ಲಿ ಪೂರಕವಾಗಿ ಚರ್ಚಿಸಲಾಗಿದೆ. ಮತ್ತು ಹೊರರಾಜ್ಯದ ವಿವಿದ ಪ್ರದೇಶಗಳಲ್ಲಿ ನೆಲೆಸಿ ಖ್ಯಾತರಿಂದ ಆಶ್ರಯಪಡೆದು ಹಾಗೂ ಆ ಪ್ರದೇಶದ ಚಾರಿತ್ರಿಕ, ಐತಿಹಾಸಿಕ ಹಿನ್ನಲೆ ಕುರಿತು ವಿಷಯವನ್ನು ವಿವರಿಸಲಾಗಿದೆ. ಶುಭರಾಯರ ಬದುಕಿನ ಮಹತ್ವದ ಘಟ್ಟಗಳನ್ನು ಇಲ್ಲಿ ಚರ್ಚಿಸಲಾಗಿದೆ. ಶುಭರಾಯನ ಬಹುಮುಖ ವ್ಯಕ್ತಿತ್ವದ ಕುರಿತು ಮತ್ತು ಕರ್ನಾಟಕವನ್ನು ಬಿಟ್ಟು ಸೊಲ್ಲಾಪುರಕ್ಕೆ ಹೋಗಲು ಪ್ರಮುಖವಾದ ಘಟನೆಯ ಹಿನ್ನಲೆಯನ್ನು ಚರ್ಚಿಸಲಾಗಿದೆ. ಇದಕ್ಕೆ ವಿದ್ವಾಂಸರ ವಿಭಿನ್ನ ಹೇಳಿಕೆಗಳನ್ನು ಅಧ್ಯಯನದಲ್ಲಿ ಚರ್ಚೆಗಾಗಿ ಬಳಸಿಕೊಳ್ಳಲಾಗಿದೆ.

**ಮೂರನೆಯ ಅಧ್ಯಾಯದಲ್ಲಿ** : ಸಂತ ಶುಭರಾಯರು ರಚಿಸಿದ ವಿಷ್ಣುವಿನ ದಶವತಾರದ ವಿವಿದ ರೂಪಗಳಾದ ಶೇಷಶಾಹಿವಿಷ್ಣು, ಮತ್ಸವತಾರ, ಕೂರ್ಮವತಾರ, ವರಹಾವತಾರ ನರಸಿಂಹವತಾರ, ವಾಮನವತಾರ, ಪರುಶರಾಮವತಾರ, ರಾಮನವತಾರ, ಕೃಷ್ಣಾವತಾರ, ಬುದ್ದಾವತಾರ, ಕಲ್ಕಿವತಾರಗಳ ಚಿತ್ರಕಲಾಕೃತಿಗಳು ಶೈಲಿ, ಬಣ್ಣಗಳ ಬಳಕೆ, ಸಂಯೋಜನೆ, ಕಲಾಕೃತಿಗಳಲ್ಲಿ ಪ್ರಮಾಣಗಳ ಹಾಗೂ ವಿಷ್ಣುವಿನ ದಶಾವತಾರದ ಕೃತಿಗಳ ವಸ್ತು ವಿಷಯವನ್ನು ಕುರಿತು ವೈಚಾರಿಕವಾಗಿ ಅಧ್ಯಯನ ಮಾಡಲಾಗಿದೆ.

**ನಾಲ್ಕನೆಯ ಅಧ್ಯಾಯದಲ್ಲಿ** : ಸಂತ ಶುಭರಾಯರು ರಚಿಸಿದ ಧಾರ್ಮಿಕ ಮತ್ತು ಪೌರಾಣೀಕ ರಾಮಾಯಣ ಮತ್ತು ಮಹಾಭಾರತಕ್ಕೆ ಸಂಬಂಧಿಸಿದ ಕಥಾಸನ್ನಿವೇಶಗಳನ್ನು ಆದರಿಸಿದ ಕಲಾಕೃತಿಗಳ ಕುರಿತು ಹಾಗೂ ಕಲಾಕೃತಿಗಳಲ್ಲಿ ಬಣ್ಣ, ಪ್ರಮಾಣ, ರೂಪ, ಲಾವಣ್ಯ, ಲಯ ಕಲಾಕೃತಿಗಳಲ್ಲಿ ಸಂಯೋಜನೆ ಹಾಗೂ ಕಲಾಕೃತಿಗಳಲ್ಲಿ ಕಂಡುಬರುವ ರಸಾನುಭವಗಳ ಕುರಿತು ಸುಮಾರು ೭೦ ಕಲಾಕೃತಿಗಳ ಛಾಯಚಿತ್ರಗಳ ಜೊತೆಗೆ ವಸ್ತವಿಷಯವನ್ನು ಹಂತಹಂತವಾಗಿ ಸವಿಸ್ತಾರವಾಗಿ ವಿವರಿಸಲಾಗಿದೆ. ಮತ್ತು ಶುಭರಾಯರ ಕಲಾಕೃತಿಗಳು ಮೂಲ ಉದ್ದೇಶಗಳನ್ನು ಮತ್ತು ಅವು ಆಕಾರ ಪಡೆದ ವಿವಿಧ ವಿನ್ಯಾಸಗಳನ್ನು ವರ್ಣಗಳ ಸಾಂಗತ್ಯ ಸಮೀಪ ದೂರದ ಪರಿಕಲ್ಪನೆ ನೆರಳು ಬೆಳಕಿನ ಛಾಯಾಕ್ರಮ ಮುಂತಾದ ಹತ್ತು ಹಲವಾರು ಸಂಗತಿಗಳ ಹಿನ್ನಲೆಯಲ್ಲಿ ಚಿತ್ರಗಳ ವಿಶ್ಲೇಷಣೆಯನ್ನು ಮಾಡಲಾಗಿದೆ. ಶುಭರಾಯರ ಕಲಾಕೃತಿಗಳ ಪ್ರಮುಖ ಧೋರಣೆಗಳನ್ನು ಇಲ್ಲಿ ಚರ್ಚೆಗೆ ಒಳಪಡಿಸಲಾಗಿದೆ.

**ಐದನೆಯ ಅಧ್ಯಾಯದಲ್ಲಿ** : ಶುಭರಾಯರ ಕಲಾಕೃತಿಗಳ. ಮೇಲಾದ ಪ್ರಭಾವ ಮತ್ತು ಪ್ರೇರಣೆಯ ಒಟ್ಟು ಲಕ್ಷಣಗಳ ಕುರಿತಾಗಿದೆ. ಇಲ್ಲಿ ಪ್ರಮುಖವಾಗಿ ಕಂಡುಬರುವ ಅವರ ಕಲಾಕೃತಿಗಳಲ್ಲಿ ಅವರದೇಯಾದ ವಿಶಿಷ್ಟ ಶೈಲಿಯನ್ನು ಕಾಣಬಹುದು. ಕಾರಣ ಇವರು ಮೂಲತಹ ಕರ್ನಾಟಕದವರಾದ್ದರಿಂದ ಮತ್ತು ಒಬ್ಬ ಉತ್ತಮ ಕಲಾವಿದರಾಗಿ. ಹೊರರಾಜ್ಯದಲ್ಲಿ ಗುರುತಿಸಿಕೊಂಡಿದ್ದಾರೆ ಆದರೆ ಇವರ ಕಲಾಕೃತಿಯಲ್ಲಿ



ಯಾವುದೇ ರಾಜ್ಯದ ಅಂದರೆ ಮಹಾರಾಷ್ಟ್ರದ ಪ್ರಭಾವ ಮತ್ತು ಕರ್ನಾಟಕದ ಪ್ರಭಾವವು ಯಾವುದು ಕಂಡುಬರುವುದಿಲ್ಲ ಹಾಗಾಗಿ ಇವರ ಕಲಾಕೃತಿಗಳಲ್ಲಿ ಇವರದೇ ಯಾದ ಶೈಲಿಯು ಕಂಡುಬರುತ್ತದೆ ಇದರಲ್ಲಿ ಪ್ರಮುಖವಾಗಿ ಇವರು ವಿಠಲನ ಭಕ್ತರಾಗಿರುವುದರಿಂದ ಚಿತ್ರ ಬಿಡಿಸುವುದರ ಮೂಲಕ ತಮ್ಮ ದೇವರನ್ನು ನಿತ್ಯಪೂಜಿಸುತ್ತಿದ್ದರು. ಅಲ್ಲದೆ ಇವರು ಹೆಚ್ಚಾಗಿ ಪೌರಾಣಿಕ ವಿಷಯಗಳಾದ ರಾಮಾಯಣ, ಮಹಾಭಾರತ, ವಿಷ್ಣುವಿನ ದಶಾವತಾರ, ಕೃಷ್ಣನ ವಿವಿಧ ಸನ್ನಿವೇಶ ಇನ್ನೂ ಮುಂತಾದ ವಸ್ತು ವಿಷಯಗಳನ್ನಾಧರಿಸಿ ರಚಿಸಿದ ಕಲಾಕೃತಿಗಳ ವಿವರಣೆಯನ್ನು ಇಲ್ಲಿ ಪ್ರಸ್ತುತ ಪಡಿಸಲಾಗಿದೆ.

**ಆರನೆಯ ಅಧ್ಯಾಯದಲ್ಲಿ** : ಸಂತ ಶುಭರಾಯರ ರಚಿಸಿದ ಸುಮಾರು ಎರಡು ನೂರು ವರ್ಷಕ್ಕೂ ಹಿಂದಿನ ಚಿತ್ರಕಲಾಕೃತಿಗಳ ಇಂದಿನ ಸ್ಥಿತಿ ಗತಿ ಕುರಿತು ಹೆಳಲಾಗಿದ್ದು ಈಗಲೂ ತಕ್ಕಮಟ್ಟಿಗೆ ಉತ್ತಮ ಸ್ಥಿತಿ ಇದ್ದೂ ಹಲವಾರು ಕಾರಣಗಳಿಂದ ನಿದಾನಗತಿಯಲ್ಲಿ ಅವನತಿಯತ್ತ ಸಾಗುತ್ತಿದ್ದು. ಹೀಗೆ ವಿವಿಧ ಆಪತ್ತಿಗೆ ಸಿಲುಕಿ ಹಾಳಾಗುತ್ತಿರುವ ಕಲಾಕೃತಿಗಳ ಕುರಿತು ಹಂತಹಂತವಾಗಿ ಆಪತ್ತುಗಳನ್ನು ಹೆಸರಿಸಿ ವಿವರಿಸಲಾಗಿದೆ. ಹಾಗೂ ಕಲಾಕೃತಿಗಳ ಸುವ್ಯವಸ್ಥಿತವಾಗಿ ಕಾಪಾಡಿಕೊಂಡು ಹೋಗಲು ವೈಜ್ಞಾನಿಕ ವಿಧಾನಗಳ ಮೂಲಕ ಸಂರಕ್ಷಣೆಯ ಕುರಿತು ಸುದಿರ್ಗವಾದ ಅಧ್ಯಯನಕ್ಕೆ ಒಳಪಡಿಸಿ ಒಟ್ಟು ಕಲಾಕೃತಿಗಳ ಸ್ಥಿತಿಗತಿ, ಆಪತ್ತು, ಸಂರಕ್ಷಣಾ ಕ್ರಮಗಳ ಕುರಿತ ವಿವರಣೆಯನ್ನು ನೀಡಲಾಗಿದೆ.

**ಏಳನೆಯ ಅಧ್ಯಾಯವು** : ಸಮಾರೂಪವಾಗಿದ್ದು. ಈ ಅಧ್ಯಾಯದಲ್ಲಿ ಈ ಹಿಂದಿನ ಆರು ಅಧ್ಯಾಯಗಳ ಒಟ್ಟು ಅಧ್ಯಯನದ ಫಲಿತಗಳನ್ನು ಈಲ್ಲಿ ಸಮೀಕ್ಷಿಸಲಾಗಿದೆ.

ಪ್ರಸ್ತುತ ಅಧ್ಯಯನದಿಂದ ಕಂಡು ಬಂದ ಕೆಲವು ಪ್ರಮುಖ ಫಲಿತಗಳು.

೧. ಕರ್ನಾಟಕದಲ್ಲಿ ಹುಟ್ಟಿ ಬೆಳದು ಟಿಪ್ಪುಸುಲ್ತಾನನ ಆಸ್ಥಾನದಲ್ಲಿ ಉಪಮುಖ್ಯಮಂತ್ರಿ ಸ್ಥಾನದವರೆಗೆ ರಾಜಕೀಯ ಕ್ಷೇತ್ರದಲ್ಲಿ ಕೆಲಸನಿರ್ವಹಿಸಿ ಆಕಸ್ಮಿಕ ಸಂದರ್ಭದ ಹಿನ್ನಲೆಯಲ್ಲಿ ಸೊಲ್ಲಾಪುರಕ್ಕೆ ಬಂದು ಅಧ್ಯಾತ್ಮಿಕ ಕ್ಷೇತ್ರಕ್ಕೆ ತೆರಳಿ ಅಲ್ಲಿಯೇ ದೇವರ ಆರಾಧನೆಗಾಗಿ ಚಿತ್ರಕಲೆಯನ್ನು ಅಭಿವ್ಯಕ್ತಿ ಮಾಧ್ಯವನ್ನಾಗಿ ಮಾಡಿಕೊಂಡು ನೂರಾರು ವರ್ಣಚಿತ್ರಗಳನ್ನು ರಚಿಸಿ ಹೋದ ಅಜ್ಞಾತ ಕಲಾವಿದನೊಬ್ಬನ ಜೀವನ ಸಾಧನೆಯ ವಿವರಗಳು ಬೆಳಕಿಗೆ ಬಂದಿವೆ.

೨. ಶುಭರಾಯನ ಕಲಾಕೃತಿಗಳನ್ನು ವ್ಯವಸ್ಥಿತವಾಗಿ ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ. ಕಲಾಕೃತಿಗಳ ವಸ್ತುವಿಷಯ ಮತ್ತು ಆತನ ಮೇಲೆ ಬೀರಿದ ಪ್ರಭಾವ ಪ್ರೇರಣೆಗಳು ವಿಶಿಷ್ಟವಾದ ಕಲಾ ತಂತ್ರಗಾರಿಕೆ ಶೈಲಿ ಮುಂತಾದ ವಿಷಯಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

೩. ಶುಭರಾಯನ ಕಲಾಕೃತಿಗಳು ಕಾಗದ ಮಾಧ್ಯಮದಲ್ಲಿ ರಚಿತವಾಗಿದ್ದು ಅವು ಕಿರುರೂಪಚಿತ್ರಗಳಾಗಿವೆ. ಹೀಗಾಗಿ. ಕಿರುರೂಪ ಚಿತ್ರಕಲಾ ಪರಂಪರೆಯ ವಾರಸುದಾರನಾಗಿ ಶುಭರಾಯ ಕೆಲಸ ಮಾಡಿದ್ದಾನೆ.

೪. ಶುಭರಾಯನ ಕಲಾಕೃತಿಗಳು ಧಾರ್ಮಿಕ\ಆಧ್ಯಾತ್ಮಿಕ ಹಿನ್ನಲೆಯಲ್ಲಿ ರಚಿತವಾಗಿದ್ದು ಭಕ್ತಿಗಾಗಿ ಚಿತ್ರಕಲೆಯನ್ನು ಬಳಸಿಕೊಂಡದ್ದು ಒಂದು ವೈಶಿಷ್ಟಪೂರ್ಣ ಬೆಳವಣಿಗೆಯಾಗಿದೆ.



೫. ಶುಭರಾಯರ ಚಿತ್ರಗಳಲ್ಲಿ ಜಾನಪದೀಯ ಅಂಶಗಳು ಹೇರಳವಾಗಿ ಕಂಡುಬರುತ್ತವೆ.

೬. ಮೈಸೂರು ತಂಜಾವೂರ ಚಿತ್ರಗಳು ಹಾಗೂ ರಾಜಸ್ಥಾನ ಕಿರುರೂಪಚಿತ್ರಗಳ ಮತ್ತು ರಾಗಮಾಲಾಚಿತ್ರಗಳು ಪ್ರಭಾವಕ್ಕೆ ಶುಭರಾಯರ ಚಿತ್ರಗಳು ಒಳಗಾಗಿವೆ.

೭. ಶುಭರಾಯರ ಚಿತ್ರಗಳು ಮಹಾಭಾರತ ಅದರಲ್ಲೂ ಶ್ರೀಕೃಷ್ಣ ಲೀಲೆಗಳಿಗೆ ಮಾತ್ರ ಸೀಮಿತವಾಗಿ ನೂರಾರು ಚಿತ್ರಗಳು ರಚನೆಯಾಗಿವೆ. ರಾಮಾಯಣಕ್ಕೆ ಸಂಬಂಧಿಸಿ ನಾಲ್ಕಾರು ಚಿತ್ರಗಳು ಪ್ರಕೃತಿ ಪ್ರಾಣಿ ಪಕ್ಷಿಗಳ ಹತ್ತಾರು ಚಿತ್ರಗಳು ಮಾತ್ರ ಕಂಡುಬರುತ್ತವೆ.

೮. ಶುಭರಾಯ ಬರಿ ಚಿತ್ರಕಾರ ಮಾತ್ರವಲ್ಲ. ಕವಿಯಾಗಿ ಸಾಹಿತ್ಯ ಕೃಷಿಮಾಡಿ ಹಲವಾರು ಕೃತಿಗಳನ್ನು ಮರಾಠಿಯಲ್ಲಿ ರಚಿಸಿದ್ದಾರೆ.

೯. ಬಹುಭಾಷಾ ಪಂಡಿತನಾಗಿ ತೆಲುಗು, ಮರಾಠಿ, ಇಂಗ್ಲೀಷ, ಕನ್ನಡ ಮುಂತಾದ ಭಾಷೆಗಳಲ್ಲಿ ಪರಿಣಿತಿಹೊಂದಿದ್ದವನಾಗಿದ್ದನು.

೧೦. ಸಂತನಾಗಿ ತನ್ನ ಏಕಾಂಗಿತನವನ್ನು ಕಳೆಯುವದಕ್ಕಾಗಿ ಈ ಚಿತ್ರರಚನಾ ಕಾರ್ಯಕ್ಕೆ ಕೈಹಾಕಿದಂತೆ ಕಾಣುತ್ತದೆ.

* * *



## ಅನುಬಂಧ–೧

# ಸಂಕ್ಷೇಪಗಳು

೦೧. ಪ್ರ.ಸಂ. : ಪ್ರಧಾನ ಸಂಪಾದಕರು

೦೨. ಕ.ಲ.ಲ.ಅ. : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು

೦೩. ಕ.ವಿ.ವಿ, ಹಂಪಿ: ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೪. ಪು.ಸಂ. : ಪುಟ ಸಂಖ್ಯೆ

೦೫. ಗು.ವಿ.ವಿ. : ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೦೬. ಮ.ಪ್ರ : ಮಹಾಪ್ರಬಂಧ

೦೭. ಮೈ.ವಿ.ವಿ. : ಮೈಸೂರ ವಿಶ್ವವಿದ್ಯಾಲಯ, ಮೈಸೂರು

೦೮. ಸಂ. : ಸಂಪಾದಕ

೦೯. ಕಿ.ಪ್ರ : ಕಿರು ಪ್ರಬಂಧ

೧೦. ಚಿತ್ರ ಸಂ : ಚಿತ್ರ ಸಂಖ್ಯೆ



೧೦. ಚಿತ್ರಕಲಾ ಪ್ರಪಂಚ (ಸಂ) ಪಿ.ಆರ್ ತಿಪ್ಪೇಸ್ವಾಮಿ
ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು
೧೯೯೩

೧೧. ಜಾಗತಿಕ ಚಿತ್ರಕಲೆ ಬಿ.ಪಿ. ಬಾಯರಿ
ಪ್ರತಿಭಾ ಗ್ರಂಥಮಾಲೆ ಧಾರವಾಡ
೧೯೯೫

೧೨. ದೃಶ್ಯಕಲಾ ಎನ್. ಮರಿಶಾಮಚಾರ್
ಸಿ.ಎಂ.ಎನ್ ಪ್ರಕಾಶನ ಬೆಂಗಳೂರು
೧೯೮೯

೧೩. ನಿಜದ ನೆಲೆ (ಸಂ) ಡಾ.ಎಸ್.ಸಿ.ಪಾಟೀಲ
ಡಾ.ಬಿ.ಕೆ ಹಿರೇಮಠ ಅಭಿನಂದನಾ ಗ್ರಂಥ ಸತ್ಯಾನಂದ ಪಾತ್ರೋಟಿ
ಬಸವೇಶ್ವರ ವಿದ್ಯಾವರ್ಧಕ ಸಂಘ ಬಾಗಲಕೋಟೆ
೨೦೦೩

೧೪. ಪ್ರಾಚೀನ ಲೇಖನ ಸಾಮಗ್ರಿಗಳು (ಮೂಲ) ಡಾ.ಅಲ್ಬರ್ಟನ್ ಗೌರ್
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ (ಅನು) ಡಾ. ಶ್ರೀನಿವಾಸ ಹಾವನೂರು
೨೦೦೩ ಡಾ.ಲಕ್ಷ್ಮೀನಾರಾಯಣ ಆರೂರು

೧೫. ಪ್ರಾಚೀನ ಭಾರತದ ಭಿತ್ತಿ ಚಿತ್ರಗಳು ಪಿ.ಆರ್.ತಿಪ್ಪೆಸ್ವಾಮಿ
ಚಿತ್ರಾಕ್ಷಿ ಸ್ಕೂಲ್ ಆಫ್ ಆರ್ಟ
ಧಾರವಾಡ ವಜ್ರಮಹೋತ್ಸವ ಸಂಚಿಕೆ
೧೯೯೫

೧೬. ಬಾಹುಬಲಿ-ರೂಪಸ್ವರೂಪ ವಿಶ್ವಕೋಶ. ಪ್ರೋ. ಹಂಪ ನಾಗರಾಜಯ್ಯ.
ಸಿ.ಜಿ. ಪಬ್ಲಿಕೇಷನ್ಸ್ ಬೆಂಗಳೂರು
೨೦೦೫

೧೭. ಬುಜರಕೆಂಚನಹಳ್ಳಿಯ ಭಿತ್ತಿ ಚಿತ್ರಕಲೆ ಒಂದು ಅಧ್ಯಯನ ಡಾ.ಎಸ್.ಸಿ. ಪಾಟೀಲ
ಅಪ್ರಕಟಿತ ಕಿರು ಸಂಶೋಧನ ಪ್ರಬಂಧ ಕನ್ನಡ ವಿ.ವಿ.ಹಂಪಿ.
೨೦೦೬

೧೮. ಬೆಳೆದು ಬಂದ ಭಾರತದ ಚಿತ್ರಕಲೆ ಪಿ.ಆರ್.ತಿಪ್ಪೆಸ್ವಾಮಿ
ಕಲಾಕ್ಷೇತ್ರ ಮೈಸೂರು
೧೯೬೨

೧೯. ಭಾರತ ವರ್ಷೀಯ ಮಧ್ಯಯುಗೀನ ಚರಿತ್ರ ಕೋಶ ವಿ.ಎಸ್. ಶಾಸ್ತ್ರಿ
ಭಾರತ ವರ್ಷಿಯ ಚರಿತ್ರೆ ಕೋಶ ಮಂಡಳ ಲಿ. ಪುಣೆ
೧೯೩೭

ಅನುಬಂಧ-೨
# ಗ್ರಂಥಋಣ


೦೧. **ಉತ್ತರ ಕನಾಟಕದ ಭಿತ್ತಿ ಚಿತ್ರಕಲೆ ಒಂದು ಅಧ್ಯಯನ** — ಡಾ. ಯಾದಪ್ಪ ಪರದೇಶಿ
ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ
ಕನ್ನಡ ವಿಶ್ವ ವಿದ್ಯಾಲಯ ಹಂಪಿ
೨೦೦೧

೦೨. **ಕರ್ನಾಟಕದ ಭಿತ್ತಿಚಿತ್ರ ಪರಂಪರೆ** — ಡಾ. ಅ.ಲ ನರಸಿಂಹನ್
ಕರ್ನಾಟಕ ಲಲಿತ ಕಲಾ ಅಕಾಡೆಮಿ ಬೆಂಗಳೂರು.
೧೯೯೮

೦೩. **ಕರ್ನಾಟಕ ಹಸ್ತಪ್ರತಿ ಚಿತ್ರಕಲೆ-ಒಂದು ಅಧ್ಯಯನ** — ಡಾ. ಎಚ್.ಎನ್. ಚಿತ್ರಗಾರ
ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ
ಕನ್ನಡ ವಿಶ್ವ ವಿದ್ಯಾಲಯ ಹಂಪಿ
೨೦೦೫

೦೪. **ಕರ್ನಾಟಕದ ಜನಪದ ಚಿತ್ರಕಲೆ - ಒಂದು ಅಧ್ಯಯನ** — ಡಾ. ಎಸ್ ಸಿ. ಪಾಟೀಲ
ವೀರಶೈವ ಅಧ್ಯಯನ ಸಂಸ್ಥೆ ಗದಗ
೧೯೯೩

೦೫. **ಕರ್ನಾಟಕದಲ್ಲಿ ಚಿತ್ರಕಲೆ** — ಶಿವರಾಮ ಕಾರಂತ
ಪ್ರಸಾರಂಗ ಮೈಸೂರು ವಿ.ವಿ. ಮೈಸೂರು
೧೯೭೮

೦೬. **ಕರ್ನಾಟಕದಲ್ಲಿ ಅರಸು ಮನೆತನಗಳು** ಸಂಪುಟ ಒಂದು — ಲಕ್ಷ್ಮೀನಾರಯಣರಾವ್
ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳಿ,
ಧಾರವಾಡ-೧೯೪೬

೦೭. **ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ** — ಕೆ.ವಿ. ಕಾಳೆ
ಪ್ರಸಾರಂಗ ಕನ್ನಡವಿಶ್ವ ವಿದ್ಯಾಲಯ ಹಂಪಿ
೨೦೦೦

೦೮. **ಕರ್ನಾಟಕದ ಸಂಸ್ಕೃತಿ ಸಮೀಕ್ಷೆ** — ಡಾ. ಎಚ್. ತಿಪ್ಪೇರುದ್ರಸ್ವಾಮಿ
ಡಿ.ವಿ.ಕೆ. ಮೂರ್ತಿ ಪ್ರಕಾಶಕರು ಮೈಸೂರು
೨೦೦೧

೦೯. **ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ** — ಡಾ. ವಿ.ಎಂ. ಬಾಗಾಯತ್
ಪಿ.ಎಚ್‌ಡಿ. ಮಹಾ ಪ್ರಬಂಧ
೨೦೦೪

೨೦. **ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ** (ಮೂಲ) ಡಾ. ಹೀರಾಲಾಲ್
ಜೈನಜೈನ ಸಂಸ್ಕೃತಿ ಸಂಸರಕ್ಷಿತ ಸಂಘ ಸೊಲ್ಲಾಪುರ (ಅನು) ಮಿರ್ಜಿ ಅಣ್ಣಾರಾಯ
ಲಾಲಾ ಚಂದ್ರ ಹೀರಾ ಚಂದ ದೇಶಿ, ಸೀಡೆಬಾಳೆ
೧೯೭೧

೨೧. **ಭಾರತೀಯ ಚಿತ್ರಕಲೆ ಸಂಕ್ಷಿಪ್ತ ಪರಿಚಯ** ಎಸ್. ಎಲ್. ಶಿರಹಟ್ಟಿ.
ವಿಜಯಕಲಾಮಂದಿರ ಗದಗ
೧೯೭೨

೨೨. **ಭಾರತೀಯ ಚಿತ್ರಕಲೆ** ಶಿವರಾಮ ಕಾರಂತ
ಕನ್ನಡ ಪುಸ್ತಕ ಪ್ರಧಿಖಾರ ಬೆಂಗಳೂರು
೧೯೯೮

೨೩. **ಭಾರತೀಯ ಚಿತ್ರಕಲೆ** ಬಿ.ಪಿ.ಬಾಯರಿ
ಪ್ರತಿಭಾ ಗ್ರಂಥಮಾಲೆ ಧಾರವಾಡ
೧೯೭೨

೨೪. **ಮಹಾರಾಷ್ಟ್ರ ಕವಿಚರಿತ್ರೆ ಭಾಗ–೨** ಶ್ರಿ ಜೆ.ಆರ್. ದಾಮೋದರ್
ಸಾಂವಳಾರಾಮ್ ಮತ್ತು ಮಂಡಳಿ, ಮುಂಬೈ
೧೯೧೩

೨೫. **ಮಹಾರಾಷ್ಟ್ರ ಸಾರಸ್ವತ ಭಾಗ–೨** ಲಕ್ಷಣ್ ವಿ. ಭಾವೆ.
ಠಾಣೆ.
೧೯೨೮

೨೬. **ಮರಾಠ ಕವಿತೇಚಾ ಉಷಃಕಾಲ ಕಿಂವ್ ಮರಾಠಿ ಶಾಹಿರಿ** ಶ್ರೀಎಸ್.ಎಂ. ವರ್ಧ
ಗರಗಾವ್ ಬ್ಯಾಂಕ್ ರಸ್ತೆ, ಮುಂಬೈ
೧೯೩೦

೨೭. **ಮರಾಠಿ ವಾಂಙ್ಮಯಾಂಚ ಇತಿಹಾಸ** ಪ್ರೋ.ರಾ.ಶ್ರೀ ಜೋಗ್
ಮಹಾರಾಷ್ಟ್ರ ಸಾಹಿತ್ಯ ಪರಿಷತ್ತು, ಪುಣೆ
೧೯೭೩

೨೮. **ಮೋರೊ ಪಾತ್ರ: ಚರಿತ್ರೆ ಅಣಿ ಕಾವ್ಯವಿವೇಚನ್** ಎಲ್.ಆರ್. ಪಾಂಗಾಕರ್
ಪಬ್ಲಿಷಿಂಗ್ ಹೌಸ್, ಚೀರಾ ಬಜಾರ್, ಮುಂಬೈ
೧೯೪೩

೨೯. **ರಸಿಕ ಕಲಾವಿದ ಸಂತ ಕವಿ ಶ್ರೀ ಶುಭರಾಯ** ಶ್ರೀ ಪು.ಜ.ಬುವಾ
ತರುಣ ಭಾರತ್ ಪ್ರಕಾಶನ ಪುಣೆ.
೧೯೭೦

೩೦. ರಾಮಚೋಶಿಕೃತ ಲಾವಣ್ಯ — ಶ್ರೀ ಶಂಕರ ತುಕಾರಾಮ, ತಾಳಿಗ್ರಾಮ.
ಚಿತ್ರಶಾಲಾ ಪ್ರಸ್, ಪುಣೆ.
೧೯೦೮

೩೧. ವರ್ಣ ಸಂಚಯ — ಡಾ.ಎಸ್ ಸಿ ಪಾಟೀಲ
ವಿಜಯ ಚಿತ್ರಕಲಾ ಮಹಾವಿದ್ಯಾಲಯ ಇಲಕಲ್
೨೦೦೧

೩೨. ಸಂತ ಕಲಾವಿದ ಶುಭರಾಯರು — ಡಾ.ಅ.ಲ. ನರಸಿಂಹನ್
ಲಲಿತಕಲಾ ಅಕಾಡೆಮಿ, ಬೆಂಗಳೂರು
೧೯೯೩

೩೩. ಸಂತ ಶುಭರಾಯ, ವ್ಯಕ್ತಿ ಅಣೆ ಕಾವ್ಯ — ಡಾ. ಬಿ.ಡಿ. ತಿವಾರಿ
ಮೂಡಿಪತ್ರ ಸಂ. ಎಫ್ (ಎಚ್.ಆರ್.ಐ)
೧೯೮೨

೩೪. ಸಾಹಿತ್ಯ ಮತ್ತು ಚಿತ್ರಕಲೆ . — ವಿ. ಸೀತಾರಾಮಯ್ಯ
ರಾಘವ ಪ್ರಕಾಶನ ಬೆಂಗಳೂರು
೧೯೮೫

೩೫. ಸಾಹಿತ್ಯದಲ್ಲಿ ಚಿತ್ರಕಲೆ. — ಎನ್. ಮರಿಶಾಮಚಾರ್
ಸಿ.ಎಂ ಎನ್ ಪ್ರಕಾಶನ್ ಬೆಂಗಳೂರು
೧೯೮೬

೩೬. ಸೃಷ್ಠಿ (ಲೇಖನ ಸಂಕಲನ) — ಡಾ. ಬಿ.ಕೆ ಹಿರೇಮಠ
ಬಾಪೂಜಿ ಗ್ರಾಮೀಣ ಅಭಿವೃದ್ಧಿ ಸಂಸ್ಥೆ (ರಿ) ಬಾಗಲಕೋಟೆ
೨೦೦೩

೩೭. ಶುಭರಾಯಕ ಚಿತ್ರ ಸಂಪ್ರದಾಯ — ಶ್ರೀ ಕುಂಜಬಿಹಾರಿ
ಗೀತಾಗುರುನಾಥ ಪ್ರಕಾಶನ್, ಸೊಲ್ಲಾಪುರು.
೧೯೬೩

೩೮. ಹಿಸ್ಟರಿ ಆಫ್ ಟಿಪ್ಪುಸುಲ್ತಾನ್ — ಮೊಹಿಬುಲ್ ಹಸನ್‌ಖಾನ್
ಬಿನ್‌ಲಿಯೋ ಫೈಲ್ ಲಿ. ಕಲ್ಕತಾ.
೧೯೭೧

೩೯. ಹಿಂದೂಸ್ತಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು — ಡಾ. ಸಂಪದಾ ಭಟ್ಟ
ಪಿ.ಎಚ್‌ಡಿ ಮಹಾಪ್ರಬಂಧ ಕ.ವಿ.ವಿ. ಹಂಪಿ
೧೯೯೮

* * *

